# ಕೊರವಂಜಿ



ಫೆಬ್ರವರಿ ೧೯೫೨

★

ಸಂಪಾದಕರು:

ಶ್ರೀ॥ ರಾ. ಶಿ.

ಬರಹಗಾರರು:

ಶ್ರೀ॥ ರಾಂಸ್ವಾಮಿ
ಶ್ರೀ॥ ಹಾ. ರಾ.
ಶ್ರೀಮತಿ ಸರಸ್ವತಿ ಅನಂತರಾಮಯ್ಯ
ಶ್ರೀಮತಿ ಬೆಂಗ್ಳೂರು ಸುನಂದಮ್ಮ
ಶ್ರೀ॥ ನಾ. ಕ.
ಶ್ರೀ॥ ಪಾಟಾಳಿ
ಶ್ರೀ॥ ರೇವಣ್ಣ
ಶ್ರೀ॥ ಪಾಪಿ
ಶ್ರೀಮತಿ ರುದ್ರಮ್ಮ
ಶ್ರೀ॥ ದಿಬ್ಬಯ್ಯ
ಶ್ರೀ॥ ಅ. ಸು. ರಾ.
ಶ್ರೀಮತಿ ನಾಗವೇಣಿ

ಇತ್ಯಾದಿ, ಇತ್ಯಾದಿ.

ತಿಳನಗೆಯ ಮಾಸಪತ್ರಿಕೆ

ಬಿಡಿ ಪ್ರತಿ:—ಕೇವಲ ನಾಲ್ಕಾಣೆ.



# ಅವನ ಪ್ರಾಣವೆಲ್ಲವೂ ಅವಳ ಮೇಲೆಯೆ

ಹೆಂಡತಿ ಯೆಂದರೆ ತನ್ನ ಹೆಂಡತಿ ಯಂತೆಯೆ ಇರಬೇಕು ಎಂದು ಅವನು ಹೇಳುತ್ತಾನೆ ಅದಕ್ಕೆ ಕಾರಣ, ಅವಳು ಜಾಗ್ರತೆಯಾಗಿ ನಡ ಕೊಳ್ಳುತ್ತಾಳೆ

ಅವಳು ಬಹಳ ಚುರುಕಾದವಳು ಬೆಳಗ್ಗೆ ವೇಳೆ ಗಂಡನಿಗೆ ಆಫೀಸಿಗೆ ಹೋಗುವಾಗ ಬೇಕಾದ ಬಟ್ಟೆಗಳನ್ನೆಲ್ಲಾ ತೆಗೆದು ಸಿದ್ಧವಾಗಿ ಇಟ್ಟಿರುತ್ತಾಳೆ. ಸಾಯಂಕಾಲ ಅವನು ಮನೆಗೆ ಬಂದು ಸೇರಿದ್ದೆ ರುಚಿಕರವಾದ ಒಂದು ಗ್ಲಾಸು 'ಟಿ' ಕೈಗೆ ಕೊಡುತ್ತಾಳೆ. ಆ 'ಟಿ' ಮಾಡುವುದಕ್ಕೆ ಅಷ್ಟೇನೂ ಖರ್ಚು ಕೂಡಾ ಇಲ್ಲಾ.

ಅವಳ ಮುಸಿನಗೆಯಂತೆಯೆ ಅವಳ ಕೈ 'ಟಿ' ಕೂಡಾ ಅವನನ್ನು ಪರವಶ ಮಾಡುತ್ತದೆ. ಆದ್ದರಿಂದಲೇ ಅವನ ಪಂಚ ಪ್ರಾಣಗಳು ಅವಳ ಮೇಲೆ ಇಟ್ಟಿದ್ದಾನೆ.

ಮಂತ್ರ ಶಕ್ತಿ ಕೊಡುವ ಪಾನೀಯ

—"ಟಿ" ಕುಡಿಯಿರಿ



ಕೇಂದ್ರ "ಟೀ" ಬೋರ್ಡಿನವರಿಂದ ಪ್ರಚುರಪಡಿಸಲ್ಪಟ್ಟಿದೆ

CTB 60


In your Make-up Locks Count a lot...
RAJA
AMLA
HAIR OIL
"HELPS YOU TO KEEP LOCKS OF LOVELY AND LUSTROUS HAIR"
MANYAM & CO., BANGALORE - MADRAS - MADURA - BOMBAY

# ಕೊರವಂಜಿ

A. ANANTHIAH

ಸಂಪುಟ ೧೦ | ಫೆಬ್ರವರಿ ೧೯೫೨ | ಸಂಚಿಕೆ ೧೧

## ಕುಟುಕಿಡಿಗಳು

★ ★

ಕೊರವಂಜಿಯು ಜವನರಿ ೩೦ನೇ ದಿನವನ್ನು ನೆನೆದು—ಓದುಗರೆಲ್ಲರಿಗೂ ಜನರವರ ಅರಿವು ಉಂಟಾಗಲಿ ಎಂದು ಹಾರೈಸುತ್ತಾಳೆ.

* * *

ಭಾರತಕ್ಕೆ ಬರಬೇಕಾದ ಅಮೇರಿಕಾ ಸಹಾಯವು ಕಮ್ಯೂನಿಸ್ಟ್ ಬಹುಮತವಿರುವ ಪ್ರಾಂತ್ಯಗಳಿಗೆ ಮೀಸಲು. (ಹೇಳಿಕೆ)

—ಅಯ್ಯೋ! ದೇವರೇ! ಮೊದಲೇ ಹೇಳಿದಿದ್ದರೆ ನಮ್ಮ ಸಂಸ್ಥಾನದಲ್ಲಿ ಕಮ್ಯೂನಿಸ್ಟರನ್ನೇ ಚುನಾವಣೆ ಮಾಡುತ್ತಿದ್ದೆವೆಲ್ಲಾ !!

* * *

ಕರಡಿ ಆಡಿಸುವವನ ಹಿಂದೆ ಹೋಗುತ್ತಾ ಇದ್ದ ಹುಡುಗರ ಗುಂಪು ನೋಡಿ ಯಾರೋ ಅಂದರಂತೆ—

—"ಓಹೋ! ಕಮ್ಯೂನಿಸ್ಟರ ಮೆರವಣಿಗೆ" ಅಂತ.

* * *

ಬೆರಳಿಗೆ ಮಸಿ ಇಲ್ಲದವನನ್ನು ಯಾಕೋ ನೀನು ವೋಟು ಮಾಡಲಿಲ್ಲ ಅಂದಾಗ ಅವನಂದನಂತೆ.

—"ಬೀಗದಕ್ಕೆ ನನ್ನ ಹತ್ತಿರ ಇದೆ—ಪೋರ್ಟರ ಹತ್ತಿರ ಪೆಟ್ಟಿಗೆ ಇದ್ದರೆ ಏನು? ಅಂದ ಹಾಗೆ ನನ್ನ ಓಟು" ಎಂದು.

*   *   *

ಶ್ರೀಮತಿ..........ಯವರ ಚುನಾವಣೆ.

—ಅಂದರೆ ಸ್ವಯಂವರವೋ—ಸ್ವಯಂವಧುವೋ!

*   *   *

ಹಿಮಾಲಯದಲ್ಲಿ ಕಂಡ ಹೆಜ್ಜೆಯ ಗುರುತುಗಳು—ಇನ್ನು ಯಾರದೂ ಅಲ್ಲ—ನಮ್ಮ ಭಾವನದೇ ಇರಬೇಕು. ಅಕ್ಕನ ಬಿಟ್ಟು ಓದೀಗೆ ಹೋದಾತ ಇನ್ನೂ ಬಂದಿಲ್ಲ. ಅವನಿಗೆ ಆ ತರಹ ಹೆಜ್ಜೆಗಳಿತ್ತು ಎಂದು ಒಬ್ಬ ಭಾವ ಮೈದ ಬರೆದಿದ್ದಾನೆ.

*   *   *

ಇಂಗ್ಲೆಂಡಿನಲ್ಲಿ ಖರ್ಚು ಉಳಿತಾಯಕ್ಕಾಗಿ ೬೦೦೦ ಚಿಲ್ಲರೆ—ಸರ್ಕಾರದ ಸಿಬ್ಬಂದಿಯನ್ನೂ ಮನೆಗೆ ಕಳಿಸುತ್ತಾರೆ.

—ಅಯ್ಯಯ್ಯೋ! ಅವರೆಲ್ಲರೂ ನಮ್ಮ ದೇಶಕ್ಕೆ ಈ ಇಂಗ್ಲೀಷಿನವರ ವಾಣಿಜ್ಯ ಸಂಸ್ಥೆಗಳಿಗೆ ಚಿನ್ನದಗಣಿಗಳಿಗೆ ಬಂದು ಸೇರಿಕೊಂಡುಬಿಡುತ್ತಾರಲ್ಲಪ್ಪೊ!!

*   *   *

ನಹಾಸ್ ಪಾಷಾ ಅವರು ಮೊಸಾಡಿಕ್‌ಗೆ ಒಂದು ಕಾಗದ ಬರೆದು 'ಹುಷಾರ್' ಅಂತ ಎಚ್ಚರಿಸಿದ್ದಾರಂತೆ.

*   *   *

ಅಲ್ಪನಿಗೆ ಐಶ್ವರ್ಯ ಬೇಕಾದರೆ ಅರ್ಧ ರಾತ್ರೀಲಿ ಚೆಂಡಾಟ ಆಡಬೇಕಂತೆ.

*   *   *

ಚುನಾವಣೆ ಖರ್ಚಿನಲ್ಲಿ ಸುಮಾರು ಭಾಗ, ಕಳಕೊಂಡ ಠೇವಣಾತಿ ಹಣದಿಂದಲೇ ಸರ್ಕಾರಕ್ಕೆ ಬಂದಿದೆ ಎನ್ನುವುದು ಶುದ್ಧ ಸುಳ್ಳಂತೆ.

*   *   *

ರಾಜಕೀಯ ತಿಸ್ರದ ಚರಿತ್ರೆ ಮಲೇರಿಯಾ ಇದ್ದಹಾಗೆ—ಆಗಾಗ್ಗೆ ಪುರ ಕಳಸುತ್ತೆ. (ಹೇಳಿಕೆ)

—ಮಾದರಿ ಮೈಸೂರಿನಲ್ಲಿ ಕೂಡ ಹಾಗೇನೇ?

# ಉರಿಗಾಳು

ಕಾಫಿ ಧಾರಣೆಯಲ್ಲಿ ಇಳಿಮುಖ (ಶಿರೋನಾಮೆ)....ಕಾಫಿ ಧಾರಣೆಯಿಂದ ಇಳಿಮುಖ ಎಂದಿರಬೇಕಲ್ಲವೆ?

*          *          *

ನಾಲ್ಕು ಮಕ್ಕಳಿಗಿಂತ ಹೆಚ್ಚಾಗಿರುವ ದಂಪತಿಗಳಿಂದ ಹೆಚ್ಚು ಕಂದಾಯ ವಸೂಲು ಮಾಡಬೇಕು. (ಮಹಿಳಾ ಸಮ್ಮೇಳನ) ಕಂದಾಯ ಕೊಡದಿದ್ದರೆ, ಹೆಚ್ಚಿನ ಮಕ್ಕಳನ್ನು ಸರ್ಕಾರದವರೇ ತೆಗೆದುಕೊಂಡು ಸಾಕಬೇಕು.

*          *          *

ಗೃಹಿಣಿಯರಿಗೆ, ಮುಖ್ಯವಾಗಿ ಪುರುಷಾರ್ಥ ಸಾಧನೆಗೆ ಕಾರಣವಾದವುಗಳಲ್ಲಿ, ದೈವಭಕ್ತಿ ಮೊದಲನೆಯದು (ಮಹಿಳಾ ಸಮ್ಮೇಳನ) ಪುರುಷಾರ್ಥ ಸಾಧನೆಗೆ ಪತಿಭಕ್ತಿಯೇ ಮುಖ್ಯವಲ್ಲವೆ?

*          *          *

ಸ್ವತಂತ್ರರಾಗಿ ನಿಂತು ಗೆದ್ದು ಬಂದ ಉಮೇದುವಾರರಿಗೆ ಈ ಕೂಡಲೇ ತಮ್ಮ ಸ್ವಾತಂತ್ರ್ಯದ ಬೆಲೆ ಏನು ಎಂಬುದನ್ನು ಪತ್ತೆ ಹಚ್ಚುವ ಪ್ರಸಂಗ ಒದಗುತ್ತದೆಯಂತೆ.

*          *          *

ಪಾಕಿಸ್ತಾನದ ಹೊಸ ಕಾಸಿನ ನಾಣ್ಯಗಳ ಮೇಲೆ "ಅರ್ಧ ಚಂದ್ರ" ಇರುತ್ತದೆ (ಸುದ್ದಿ)....ನ್ಯಾಯವೆ.

*          *          *

ಸೂರ್ಯ ರಶ್ಮಿಯಿಂದ ಅಡುಗೆ ಮಾಡಿ ಆಹಾರವನ್ನು ನಾನು ನಾಲ್ಕೈದು ದಿನಗಳ ದಿನಗಳ ಹಿಂದೆ ತೆಗೆದುಕೊಂಡಿದ್ದೇನೆ (ನೆಹರು) ಏಕೆ? ಬಿಸಿಲು ಗುದುರೆಯನ್ನೇರಿ ಆನಂದವಾಗಿ ಹೊಗುತ್ತಿರುವ ಅನೇಕರನ್ನು ನಾವೆ ನೋಡಿದೇವೆ, ಮೊನ್ನೆ ಮೊನ್ನೆ.

*          *          *

ಬೊಂಬಾಯಿ ನಗರದ ಪೋಲಿಂಗ್ ಬೂತಿನೊಳಕ್ಕೆ ಒಂದು ಕಪಿ ನುಗ್ಗಿತು (ಸುದ್ದಿ) ಇತರೇ ಕಡೆಗಳಲ್ಲೂ ನುಗ್ಗಿತು; ಸುದ್ದಿಗಾರರು ಹಾಗೆ ವರದಿಮಾಡಲಿಲ್ಲ, ಅಷ್ಟೆ.

*          *          *

ಕಲ್ಯಾಣ (ಪಶ್ಚಿಮ) ಕ್ಷೇತ್ರದಲ್ಲಿ 'ಚಂಪಿ' ಎಂಬ ಒಂದು ನಾಯಿಗೂ ಮತದಾರರ ಪಟ್ಟಿಯಲ್ಲಿ ಸ್ಥಾನ ದೊರೆತ್ತಿತ್ತಂತೆ.. ಯಾವ ಪಕ್ಷದ ಅನುಯಾಯಿಯೋ?

* * *

ಗಾಂಧೀ ತತ್ವಗಳನ್ನೆಲ್ಲಾ ಪಟ್ನಾದಲ್ಲೊಬ್ಬ ಶಿಲ್ಪಿ ಕಲ್ಲು ಹಲಗೆಗಳಮೇಲೆ ಕೆತ್ತಿಸಿ ನಿಲ್ಲಿಸುತ್ತಾನೆ. (ಸುದ್ದಿ) ಗಾಂಧೀ ತತ್ವಗಳು ಯಾವುವು ಎಂದು ಅವನು ಹೇಗೆ ತಾನೆ ಪತ್ತೆ ಮಾಡುತ್ತಾನೊ, ಪಾಪ.

* * *

ಮತದಾರರ ಪಟ್ಟಿಯಲ್ಲಿ ನಿಮ್ಮ ಹೆಸರಿಲ್ಲ; ಮುಂದೆ ೫ ವರ್ಷವಾದಮೇಲೆ, ಮತ್ತೊಂದು ಚುನಾವಣೆಗೆ ವೋಟುಕೊಟ್ಟು, ಮುಂದಿನ ಚುನಾವಣೆಯೊಳಗಾಗಿ ಸಾಯುವುದಕ್ಕೆ ಏರ್ಪಾಟು ಮಾಡೋಣ ಅಂತ ಇದ್ದೆ ಸ್ವಾಮಿ, ಅಂದನಂತೆ ಒಬ್ಬ.

* * *

ನಮ್ಮ ಮಾತನ್ನು ನಾವು ಪಾಲಿಸದಿದ್ದರೆ, ಮುಂದೆ, ನಮ್ಮನ್ನು ಅಧಿಕಾರದಿಂದ ಓಡಿಸುತ್ತೇವೆ ಎಂದು ನೀವು ವಚನ ಕೊಡಿ....ನಾವು ವಚನಕ್ಕೆ ತಪ್ಪಿದರೆ, ನೀವೂ ವಚನದಿಂದ ತಪ್ಪಿಸಿಕೊಳ್ಳಿ. (ಭಾಷಣ)

* * *

ಶತ್ರುಗಳನ್ನು ಪ್ರೀತಿಸಬೇಕು ಎಂದು ಧರ್ಮ ಬೋಧಿಸುತ್ತದೆ....ಅದಕ್ಕೋಸ್ಕರವೇ ಅನೇಕರು ಮಾನವನ ಪರಮ ಶತ್ರುವಾದ ಹೆಂಡವನ್ನು ಪ್ರೀತಿಸುತ್ತಿರುವುದು.

* * *

ನಮ್ಮೂರು ಗುಡಿಯ ದೇವರು ಸ್ವಯಂಭುವೇ ನಾಲ್ಕು ಜನ ಕಡೆದು ನಿಲ್ಲಿಸಿದರೆ, ಎಂಬುದರಮೇಲೆ ವಾದ ವಿವಾದ ಹುಟ್ಟಿದೆ....ಅನೇಕ ಮಂತ್ರಿಗಳ ವಿಷಯದಲ್ಲೂ ಇದೇ ಚರ್ಚೆ ಎದ್ದಿದೆ.

* * *

ರಾಮರಾಜ್ಯ ಹೇಗಿತ್ತು ಎಂಬ ಪ್ರಶ್ನೆಯನ್ನು ಕುರಿತು ಒಬ್ಬರು ಒಂದು ಗ್ರಂಥ ಬರೆದಿದ್ದಾರೆ....ಅದಕ್ಕಿಂತ ಯಾವಾಗ ಬರುತ್ತೆ ಎಂಬ ಪ್ರಶ್ನೆ ಮುಖ್ಯ.

* * *

ಸೀತಾರಾಂ ಎಂಬುವರು ಆಂಧ್ರ ಪ್ರಾಂತ್ಯ ಸಂಪಾದನೆಗಾಗಿ ಸತ್ಯಾಗ್ರಹ ಹೂಡುವವರಿದ್ದಾರೆ....ಕನ್ನಡ ಪ್ರಾಂತ್ಯ ಸಂಪಾದನೆಗೂ, ಪತಿತ ಪಾವನ ಸೀತಾರಾಮನೇ ಶರಣು.

---

# ದಂಡಯ್ಯ–ಅಣಕು

ಕೆಸರುಕೊಪ್ಪ, ಭಾವಿಕೆರೆ, ತೊಂಡೆಭಾವಿ ಇಂದ ಶಾಸನ ಸಭೆಗೆ ಇದ್ದ ಒಂದು 'ಸೀಟು' ಕಳೆದು ನಾಲ್ವತ್ತು ವರ್ಷಗಳಿಂದ ಪಟೇಲ್ ದಂಡಯ್ಯನ ಮನೆತನಕ್ಕೇ ಮೀಸಲು. ಕಳೆದ ಇಪ್ಪತ್ತು ವರ್ಷಗಳಿಂದ ಪಟೇಲ್ ದಂಡಯ್ಯ ಅವಿರೋಧವಾಗಿ ಆಯ್ಕೆಯಾಗುತ್ತಿದ್ದ. ಇದ್ದುದರಲ್ಲಿ ತಕ್ಕಮಟ್ಟಿಗೆ ಭಾರಿಕುಳ. ಮಾತಿ ಮರ್ಯಾದೆ ಉಳಿಸುಕೊಳ್ಳುಕ್ಕೆ ಹಣ ಧಾರಾಳವಾಗಿ ಖರ್ಚುಮಾಡುವುದಿರಲಿ, ಖೂನಿ ಕೂಡ ಮಾಡುಕ್ಕೆ ಸಿದ್ಧ. ಗರಡಿ ಮನೇಲಿ ಅಡ್ಡಾಡಿದವ. ಮೂರುಸಾರಿ ಉಸ್ತಾದು ದಂಡಯ್ಯ ಅಂತ ಷಹರಿನ ಪೇಪರುಗಳಲ್ಲಿ ಇವನ ಫೋಟೋ ಕೂಡ ಬಂದಿತ್ತು. ಮುಖ್ಯ....ಆ ಪ್ರದೇಶದಲ್ಲಿ ಅವನು ಅನಭಿಷಿಕ್ತ ರಾಜ.

ಭಾವಿಕೆರೇಲಿ ಭೀಮಪ್ಪ ಅಡಿಕೆ ವ್ಯಾಪಾರ ಮಾಡ್ತಾ ಇದ್ದ. ಮೂರು ತಿಂಗಳು ದುಡಿದು, ವರ್ಷಕ್ಕೆಲ್ಲಾ ಉಣ್ಣುಕ್ಕೆ ಉಡುಕ್ಕೆ ಆಗೋ ಅಷ್ಟು ಸಂಪಾದಿಸಿಕೊಳ್ಳುತ್ತಿದ್ದ. ಆದರೆ ಕಳೆದ ಮೂರು ವರ್ಷಗಳಿಂದ ಅಡಿಕೆ ಬೆಲೆ ಸನ್ನಿಜ್ವರ ಏರಿದಹಾಗೆ ಏರುತ್ತಾ ಬಂತು. ಧನುರ್ಮಾಸದ ಹೊತ್ತಿಗೆ ಬೆಳಗಿನ ಝಾವ ಹಣೇ ಮೇಲಿನ ನಾಮ ಉಬ್ಬೋಹಾಗೆ ಉಬ್ಬಿತು. ಭೀಮಪ್ಪನ ಕೈಲಿ ಬೇಡ ಬೇಡ ಅಂದರೂ ಲಕ್ಷ್ಮಿ ನಾಚ್ ಮಾಡುಕ್ಕೆ ಶುರು ಮಾಡಿದಳು. ಭೀಮಪ್ಪ ಅಂಗೈ ನೋಡಿ ಲಕ್ಷ್ಮೀ ಕಂಡು ಮುಂಡೆ ಕೆಡಿಸಿಕೊಂಡ ಅನ್ನಬಹುದು.

ಅದಕ್ಕೇ ಈ ಸಾರಿ ನಾನು ಉಮೇದುವಾರನಾಗಿ ನಿಲ್ತೀನಿ ಇಡೀನು ದಂಡಯ್ಯನ ಅಪ್ಪನ ಮನೆಗಂಟೋ! ಎಂದ.

ಪಂಡಿತ ಕಪ್ಪಣ್ಣ ಕೆಸರು ಕೊಪ್ಪದಲ್ಲಿ ಲಾಗಾಯ್ತಿನಿಂದ ನೆಲಸಿದ್ದ ಪ್ರತಿಭಾಶಾಲಿ ವ್ಯಕ್ತಿ. ಪೌರೋಹಿತ್ಯ, ಆಯುರ್ವೇದ' ವಂಶಪಾರಂಪರ್ಯವಾಗಿ ಬಂದ ಕಸುಬು. ಅಪ್ಪ ಬಿಟ್ಟುಹೋದ ಆಸ್ತಿ ಅಂದರೆ ದರ್ಭೆ ಕಟ್ಟು— ಕುಪ್ಪಿ ಮಾತ್ರ. ಆದರೂ ಅದನ್ನೇ ನಿಧಿಮಾಡಿಕೊಂಡು ಮೂರು ವರ್ಷದಲ್ಲಿ ಆರು ಖಂಡುಗ ಭತ್ತ, ಬರೋಹಾಗೆ ಮಾಡಿಕೊಂಡಿದ್ದಲ್ಲದೇ ಒಂದು ಮನೇನೂ ಕಟ್ಟಿಸಿ ಕೊಂಡಿದ್ದ.

ಭಾವಿಕೆರೆ ಭೀಮಪ್ಪ—ಪಂಡಿತ ಕಪ್ಪಣ್ಣ—ಗೋಲೀ ಆಟದ ಗೆಳೆಯರು. ಭೀಮಪ್ಪ ತನ್ನ ಆಸೆ ಹೇಳಿಕೊಂಡ ಕಪ್ಪಣ್ಣನಿಗೆ. ಅವನ ಸಲಹೆ ಸಹಾಯ ಕೋರಿದ.

ಕಪ್ಪಣ್ಣ ಯೋಚನೆಮಾಡಿ ಹೇಳಿದ, ನೋಡು ಭೀಮು ನೀನು ನಿಲ್ಲೋದು ಬೇಡ. ಆದರೆ, ತೊಂಡೇಭಾವಿಲಿ ರಂಗಪ್ಪ ಓದಿದ ಚೂಟಿ ಹುಡುಗ, ಅಪ್ಪ ಅಮ್ಮ ಇಲ್ಲ. ಆದರೆ ಆಸ್ತಿ ಪಾಸ್ತಿ ಇದೆ. ನಿನಗಿರೋದು ಒಂದೇ ಮಗಳು, ಅವಳನ್ನು ಅವನಿಗೆ ಕೊಟ್ಟು ಮದುವೆಮಾಡು. ಅವನನ್ನು ನಿಲ್ಲಿಸಿ ನಾವೆಲ್ಲಾ ಕೆಲಸ ಮಾಡೋಣ. ನಿನ್ನ ಅಳಿಯ ನಿಂತು ಜಯಿಸೋದು. ನೀನು ನಿಲ್ಲುವುದಕ್ಕಿಂತ ಚೆನ್ನು. ಹೇಗೂ ನಿನಗೆ ಮಾತು ಆಡಲೂ ಕಷ್ಟ ಅಂದ.

ಭೀಮಪ್ಪ ಒಪ್ಪಿದ. ಕಪ್ಪಣ್ಣ ಸೂತ್ರಧಾರಿಯಾಗಿ ರಂಗಪ್ಪನನ್ನ ಭೀಮಪ್ಪನ ಅಳಿಯನನ್ನಾಗಿ ಮಾಡಿದ. ಲಗ್ನಕ್ಕೆ ಬಂದ ಆಹ್ವಾನಿತರು ರಂಗಪ್ಪನಿಗೇ ವೋಟುಕೊಡಿ ಎಂದು ಅಚ್ಚೊತ್ತಿದ್ದ ಚೀಲಗಳಲ್ಲಿ ತಾಂಬೂಲ ತೆಂಗಿನಕಾಯಿಗಳನ್ನು ತೆಗೆದುಕೊಂಡು ಹೋದರು.

ಚುನಾವಣೆ ಹತ್ತಿರ ಬಂತು. ಭಾವೀಕೆರೆ, ತೊಂಡೇಭಾವಿಗಳಲ್ಲಿ ಭೀಮಪ್ಪ ರಂಗಪ್ಪ ಎಲ್ಲರನ್ನೂ ಪುಸಲಾಯಿಸಿ ರಂಗಪ್ಪನಿಗೇ ಓಟು ಕೊಡುವಂತೆ ಮಾಡಿಕೊಂಡರು. ಆದರೆ ಕೆಸರು ಕೊಪ್ಪದಲ್ಲಿ ಜನಸಂಖ್ಯೆ ಬಹಳ ಹೆಚ್ಚು ಇವರು ರಂಗಪ್ಪನಿಗೆ ವೋಟುಕೊಡಿ ಅಂತ ಅಲ್ಲಿ ಕಾಲಿಟ್ಟರೆ ಗಡಿಯವರು ಇವರ ಕಾಲು ಮುರಿದು ಕೈಗೆಕೊಟ್ಟು ಕಳಿಸುತ್ತಾರೆ ಎಂಬ ನ್ಯಾಯವಾದ ಭೀತಿ ಇದ್ದೇ ಇತ್ತು. ಅದಕ್ಕೆ ಅವರು ಕಪ್ಪಣ್ಣನಿಗೆ ಕೈಮುಗಿದು, "ಪಂಡಿತರೇ, ನೀವು ಕೆಸರು ಕೊಪ್ಪದವರು ಏನಾದರೂ ಮಾಡಿ ಅದನ್ನು ವೋಟುಗಳಿಸಬೇಕು ಮುಗುವಾಗಿ ನಮ್ಮ ರಂಗಪ್ಪನಿಗೆ" ಅಂದರು.

ಇಂದು ಕೆಸರುಕೊಪ್ಪದಲ್ಲಿ ಅಣಕು ಚುನಾವಣೆ, ವೋಟುಮಾಡಲು ಬಂದ ಜನರ ಸಂಖ್ಯೆ ಅವರ ಹುಮ್ಮಸ್ಸು 'ದಂಡಯ್ಯಾ ಕಿ ಜೈ' ಕೂಗುಗಳು. ಗಂಡಸರಿಗಿಂತ ಹೆಂಗಸರೇ ಹೆಚ್ಚಾಗಿ ಬಂದಿದ್ದು. ಎಲ್ಲಾ ನೋಡಿ ಅನುಭವಿಕರು "ಭೇಷ್, ಕೆಸರುಕೊಪ್ಪದಲ್ಲಿ ೧೦೦ಕ್ಕೆ ೧೦೯ ಜನ ಮತ ಕೊಡುತ್ತಾರೆ." ಎಂದುಕೊಂಡರು.

ಆದರೆ 'ಮತ' ಕೊಟ್ಟು ಹಿಂದಕ್ಕೆ ಮನೆಗಳಿಗೆ ಹೋದಾಗ ಹಳ್ಳಿಯವರಿಗೆ ಸುದ್ದಿ ಬಂತು. ಕಪ್ಪಣ್ಣನ ಮನೆಯಲ್ಲಿ ಕಳ್ಳತನವಾಯ್ತಂತೆ. ಇದ್ದ ಕುಪ್ಪೀ ಮಾತ್ರೆಗಳೆಲ್ಲಾ ಕಳ್ಳತನವಾಯ್ತಂತೆ ಅಂತ. ಅಷ್ಟರಲ್ಲೇ ಅಂಚೆ ಶಾಮಣ್ಣನ ತಾಯಿ ಸಾಗತ್ತೆ ಬೊಬ್ಬಿಟ್ಟಳು. ವೋಟು ಕೊಡುಕ್ಕೆ ನಾವೆಲ್ಲಾ ಮನೆ ಬಿಟ್ಟ

ಹೋದಾಗ ಬಕೆಟ್ಟು ಕೊಡ್ಪಾನೆ ಕದ್ದಿದಾರೆ ಯಾರೋ ಕಳ್ಳರು ಅಂತ ಕಣ್ಣೀರಿಟ್ಟಳು.

ಈ ಸುದ್ದಿ ಹಳ್ಳಿಯಲ್ಲೆಲ್ಲಾ ಕಾಡುಕಿಚ್ಚು ಹರಡಿದಹಾಗೆ ಹರಡಿತು. ಮನೆಯಲ್ಲಿ ಏನೇನು ಸಾಮಾನು ಕಳ್ಳತನವಾಗಿರಬಹುದು ಅಂತ ಸಾಮಾನುಗಳ ಝಾಡ್ತಿಯಲ್ಲೇ ಆ ದಿನ ದಬ್ಬಿದರು ಊರಿನವರು

ಇದಾದ ತರುಣದಲ್ಲೇ ಅಲ್ಲಿ ಚುನಾವಣೆ. ದಂಡಯ್ಯ ಲಕ್ಷಣವಾಗಿ ಜರೀ ಪೇಟ, ಕ್ಲೋಸ್ ಕಾಲರ್ ಕರೀ ಲಾಂಗ್ ಕೋಟ್. ಗಿರ್ಕಿ ಚಡಾವು ಹಾಕಿಕೊಂಡು ಅಡ್ಡಾಡ ಹತ್ತಿದ. ಎಂಟಾಯ್ತು. ಒಂಭತ್ತಾಯ್ತು....ಹನ್ನೆರಡಾಯ್ತು....ನೂರರಲ್ಲಿ ಮೂರು ಜನ ಕೂಡ ಓಟು ಕೊಡಲು ಬರಲಿಲ್ಲ. ಮಧ್ಯಾಹ್ನ ಕೂಡ ಅದೇ ರೀತಿ. ಓಟಿನ ಬೂತುಗಳಲ್ಲಿ ಇದ್ದವರು ಭೂತಗಳಂತೆ ಬೆಪ್ಪಾದರು.

“ಓಟು ಕೊಡುಕ್ಕೆ ಹೋಗಿ ಮನೇಲಿದ್ದ ಹಣ ಕಳೆದುಕೊಳ್ಳೋಣವೇ” ಎಂಬ ಸಮಜಾಯಿಷಿ ದಂಡಯ್ಯನಿಗೆ ಆಮೇಲೆ ಕೇಳಿಬಂತು. ಕಡೆಗೂ ದಂಡಯ್ಯ ಠೇವಣಾತಿ ಕಳೆದುಕೊಂಡ.

ಪಂಡಿತ ಕಪ್ಪಣ್ಣ ಒಂದು ಅಡಿಕೆ ತೋಟ ಮೊನ್ನೆ ಮೊನ್ನೆ ಕೊಂಡುಕೊಂಡ, ಭಾವೀಕೆರೆ ಹತ್ತಿರ ಅಂತ ಯಾರೋ ಅಂದರು.

—ರಾಂಸ್ವಾಮಿ.




—“ಹೇಗಿದ್ದರೂ ಠೇವಣಿ ಹಣ ವಾಪಸ್ಸು ಬಂದರೆ ಮುನ್ಸಿಪಾಲ್ಟಿ ಎಲಕ್ಷನ್‌ಗೆ ನಿಂತುಬಿಡಬಹುದು—”

# ಗುರು ?

**ಅವನು :** ಕೃತಘ್ನ ! ಕಡುಪಾಪಿ ! ಕಲ್ಮನದ ಧನದನು !
ಉಪಕಾರ ಮರೆವನವನಿತ್ತ ಕೈ ಕಡಿವ !

**ನಾನು :** ಊಹು ! ನಾನೊಬ್ಬಗುಪಕಾರ ಮಾಡಿಹೆನೆ;
ನನ್ನ ನವನೆಂದಿಗೂ ತಪಿಸಲಿಲ್ಲ

**ಅವನು :** ಮಹಾತ್ಮನವನನ್ನು ಕರೆದುತಾ ! ಕೈ ಮುಗಿವೆ !
ಗುರುವೆಂದು ಶಿರಬಾಗಿ ನಮಿಪೆ ನೀಗ !

**ನಾನು :** ನಿನ್ನಾಸೆ ಬರಿ ಕನಸು ! ಕರೆತಂದರಾಗದದು !
ಬಂದರೂ ಮಾತಾಡ ! ಮೂಕನವನು.

— ನಾ. ಕಾ.



# ಕೊರವಾವಲೋಕನ

ರಂಗು ಕ್ಲಬ್ಬಿಗೆ ಬಂದಾಗ ಅವನ ರಂಗೇ ಬದಲಾಯಿಸಿತ್ತು. 'ಏಕೋ! ಮಗನೆ? ಹೀಗೆ ಸುಸ್ತಾಗಿದ್ದಿ' ಅಂತ ಕೇಳಿದೆ. ಅವನಂದ "ಮನೇಲಿ ಈ ದಿನ ರಂಪವೋ ರಂಪ. ನನಗೆ ತಿರುವಾಂಕೂರಿಗೆ ವರ್ಗಮಾಡಿಸಿಕೊಳ್ಳಕ್ಕೆ ಇಷ್ಟ ವಿದೆಯೋ ಅಂತ ನಮ್ಮ ಕಲ್ಕತ್ತಾ ಕೇಂದ್ರ ಕಛೇರಿಯಿಂದ ಕಾಗದ ಬಂದಿತ್ತು. ನನಗೆ ಈ ಊರು ಬಿಟ್ಟು ಅಲ್ಲಿಗೆ ಹೋಗಲು ಇಷ್ಟವಿಲ್ಲ. ಆದರೆ ನನ್ನ ಹೆಂಡತಿ ಅಲ್ಲಿಗೇ ಹೋಗೋಣ ಅಂದ್ರೆ. ವರ್ಗಕ್ಕೆ ಒಪ್ಪಿಕೊಳ್ಳಿ—ಟೇ ಮಾರೋ ನಿಮಗೆ ಯಾವ ಊರಾದರೇನು ಅಂತ ರಂಪಕ್ಕೆ ಶುರು ಹಚ್ಚಿದಳು. ಅವಳಿಗೆ ಸಮ ಜಾಯಿಷಿ ಹೇಳುಕ್ಕೇ ಆಗಲಿಲ್ಲ. ಮಲಯಾಳಕ್ಕೆ ಹೋದರೆ 'ಮರಮಕ್ಕ ತಾಯಂ' ಪ್ರಕಾರ ಬಂದ ಸಂಬಳವೆಲ್ಲಾ ಅವಳದೇ ಅಂತಲೋ ಏನೋ ಅವಳ ಮನಸ್ಸಿನಲ್ಲಿ. ನಾಡಿದ್ದು ನಾಲ್ಕು ಜನನ್ನ ಮನೆಗೆ ಊಟಕ್ಕೆ ಕರೆದಿದ್ದೀನಿ. ಅವಳನ್ನ ಎದುರುಹಾಕಿಕೊಳ್ಳೋಹಾಗಿಲ್ಲ. ಏನು ಮಾಡಲಿ ಈಗ? ಕೊಣಚಿ ಹೊಕ್ಕನಾಯಿನ ಹಾಗೆ ಆಗಿದೆ ನನಗೆ, ಮೈ ಪರಚಿಕೊಳ್ಳೋಣವೇ ಅನ್ನಿಸಿದೆ" ಅಂತ ಗೋಳುಗರೆದ.

ಪಕ್ಕದ ಮೇಜಿನ ಹತ್ತಿರ ದೊಡ್ಡ ಪತ್ರಿಕೆ ಹಿಂದೆ ಕೊರವ ಅವಿತುಕೊಂಡಿದ್ದುದು ನಮಗೆ ಅವ ಕೆಮ್ಮಿದಾಗಲೇ ಗೊತ್ತಾಗಿದ್ದು. ಹಾಗೆ ಕೆಮ್ಮಿದ. ಅವನ ಕಡೆ ನೋಡಿದೆವು. ಪತ್ರಿಕೆ ಮಡಿಚಿಟ್ಟು ನಮ್ಮ ಮೇಜಿನ ಹತ್ತಿರಕ್ಕೆ ಬಂದ. ರಂಗುವಿನ ತಲೆ ಸವರಿ 'ನೋಡು! ರಂಗೂ ಇದಕ್ಕೆ ಯಾಕೆ ಇಷ್ಟು ಯೋಚನೆ! ಮನೆಗೆ ಹೋಗಿ ಹೇಳು. ಮಲಯಾಳದಲ್ಲಿ ಮರುಮಕ್ಕತಾಯಂ ಇರೋದರಿಂದಲೇ ಅಲ್ಲಿ ಕಮ್ಯೂನಿಸ್ಟ್‌ಗಳು ಗೆದ್ದಿರೋದು. ಹಾಗಾದರೂ ಆದರೆ ಇದ್ದ ಆಸ್ತಿಯನ್ನೆಲ್ಲಾ ಎಲ್ಲರೂ ಹಂಚಿಕೋಬಹುದು. ಆಗ ಗಂಡಸರಿಗೂ ಸ್ವಲ್ಪ ಸಿಕ್ಕೇ ಸಿಗುತ್ತೆ ಅಂತ ಇಂತಹ ವಿಷಮ ಸಮಯದಲ್ಲಿ ಅಲ್ಲಿ ಹೋದರೆ ನಿನಗರ್ಧ ಸಂಬಳ ಅವಳಿಗರ್ಧ ಸಂಬಳ ಅಂತ ಕಾನೂನು ಬರುತ್ತೆ ಅಂತ ಹೆದರಿಸು. ಅವಳು ಸುಮ್ಮಗಾಗುತ್ತಾಳೆ' ಅಂದ.

ರಂಗುವಿನ ಮುಖ ಜ್ಯೋತಿರ್ಮಯವಾಯಿತು. ಎಲ! ಎಲಾ! ಇಷ್ಟಕ್ಕೇ ಇವನು ಸುಸ್ತೇ ಅಂದುಕೊಂಡೆ!

* * *

'ನಿನ್ನೆ ಸಿನಿಮಾ ಹೇಗಿತ್ತೋ' ಎಂದೆ.

'ಏನೂ ಚೆನ್ನಾಗಿರಲಿಲ್ಲಕಣೋ' ಕಾಸುಕೊಟ್ಟ ತಪ್ಪಿಗೆ ಪೂರ್ತಿಯಾಗೋ ತನಕ ಕೂತಿದ್ದೆವು. ಕಾಸೂಚೌರ, ತಪಸ್ಸೂ ಮಾಡಿದಹಾಗಾಯ್ತು' ಅಂದ ಶಾಮು.

'ನಾನು ಹೇಳಿದೆ ನಿನಗೆ. ರಾಹುಕಾಲ ಹೊರಡಬೇಡವೋ ಅಂತ ನೀನು ಕೇಳಲಿಲ್ಲ ಅದಕ್ಕೇ ಹಾಗಾಯ್ತು' ಅಂದೆ.

'ಓಹೋ! ನಕ್ಷತ್ರ ನೋಡಿ ಜೀವನ ನಡೆಸ್ತೀಯೋ' ಎಂದ ಶಾಮು, ಮೂದಲಿಸುವ ದನಿಯಲ್ಲಿ.

ಆ ಹೊತ್ತಿಗೆ ಕೊರವ ಬಂದ, ಬಿರುಗಾಳಿ ಬಂದಹಾಗೆ ಬಂದ. ನನ್ನೆದುರಿನಲ್ಲಿದ್ದ ತಟ್ಟೆಗೆ ಕೈಹಾಕಿ ಇದ್ದ ಒಂದು ಜಾಮೂನನ್ನು ಮಾನು ಮಾನನ್ನು ನುಂಗೋ ಹಾಗೆ, ನುಂಗಿದ. ನಂತರ ಹೇಳಿದ. 'ಯಾರು ನಕ್ಷತ್ರದ ಮಾತು ಆಡಿದೋರು ! ಅವರ ತಲೇಲಿ ಸ್ವಲ್ಪ ಮೆದುಳಿದ್ದಹಾಗಿದೆ. ಅಮೇರಿಕಾ ಇಂಗ್ಲೆಂಡ್ ಮುಂತಾದ ಪ್ರಬಲ ರಾಷ್ಟ್ರಗಳನ್ನು ಭಯಪಡಿಸುತ್ತಿರುವ ಮಹಾ ಮಹಿಮ ಶ್ರೀ ಸ್ಟಾಲಿನ್ ಕೂಡ ನಕ್ಷತ್ರಗಳನ್ನು ನೋಡಿಯೇ ಕೆಲಸ ಮಾಡೋದು. ಕುಂಡಲಿ ಹಾಕಿ ನೋಡೇ, ಗೊಂದಲಮಾಡೋದು. ಮೊನ್ನೆ ನೋಡಿ ಹೋರಾ ಪತ್ರಿಕೇಲಿ ಸ್ಟಾಲಿನ್ ನಕ್ಷತ್ರಕ್ಕೆ ಕಾಶ್ಮೀರದಲ್ಲಿ ಗುರುಬಲ ಈಗ ಅಂತ ಬಂದಿತ್ತು. ಕೂಡಲೇ ಹುಕುಂ ಹೊರಡಿಸಿದ. ಪ್ರಪಂಚ ಸಂಸ್ಥೆಯಲ್ಲಿ ಕಾಶ್ಮೀರ ವಿವಾದ ಬಂದಾಗ. ರಷ್ಯಾ ಪ್ರತಿನಿಧಿ ಒಂದು ಟಾಂಗ್ ಕೊಟ್ಟ. ಅಲ್ಲಿನ ತನಕ ಜಫರುಲ್ಲಾ ಹೇಳಿದಹಾಗೆ ಬರೆದು ಕೊಡುತ್ತಿದ್ದ ಆಂಗ್ಲೋ ಅಮೇರಿಕನ್ನರು ಥಂಡಾ ಆದರು. ಕಾಶ್ಮೀರದ ಪ್ರಶ್ನೆಯಲ್ಲಿ ಮುಖ್ಯ ವಿಷಯ ಗೊತ್ತೇ ! ಗುರುಬಲ ಚೆನ್ನಾಗಿದೆ ಸ್ಟಾಲಿನ್ನಗೆ. ಕಾಶ್ಮೀರದ ಹಣೇ ಬರಹ ದೇವರೇ ಬಲ್ಲ !!

ಅದಕ್ಕೇ ನಾವು ಹೇಳೋದು, ಈ ರಾಹುಕಾಲ, ಗುರುಬಲ ! ನಕ್ಷತ್ರ ಇದರಲ್ಲಿ ಏನೋ ಮರ್ಮ ಇದೆ ಅಂತ.

ಎಲ್ಲಿಂದೆಲ್ಲಿಗೆ? ಕೊರವ ಪೂರ್ಣಮಿ ಹತ್ತಿರ ಹತ್ತಿರ ಹೀಗೆ ಅನ್ನಿ. ಸಮುದ್ರ ಉಬ್ಬಿದ ಹಾಗೆ ಉಬ್ಬುತಾನೆ.

* * *

"ಕತ್ತಲೇ ಕೊಠಡೀಲಿ ನೆರಳು ನೋಡಿ ಬಾಯ್ ಬಿಡ್ತಾರಲ್ಲೋ ಜನ"

ಅಂದ ಕೊರವ. ಏಕಾದಶಿ ಸಾಯಂಕಾಲ ಕ್ಲಬ್ಬಿನಲ್ಲಿ ಮಸಾಲ್‌ದೋಸೆ ತಿನ್ನುತ್ತಿದ್ದಾಗ, ಮನೇಲಿ ದಿಟವಾಗಲೂ ಫಲಾಹಾರವಾದ್ದರಿಂದ—ಅಗಲೇ ಪಲ್ಯದಲ್ಲಿ ಕಲ್ಲು ಸಿಕ್ಕಿ, ಅದೂ ಬುದ್ಧಿ ಹಲ್ಲಿಗೆ ಸಿಕ್ಕಿ ಬುದ್ಧಿ ಕೆಡುವಷ್ಟು ನೋವಾದುದು. ಬಾಯಲ್ಲಿ ಈ ಬೇನೆ ಕಿವಿಗೆ ಕೊರವನ ಬೇನೆ. ಮೂಗು ಉದ್ದ ಮಾಡಿ ನಾಲಿಗೆ ಹೊರಳಿಸಿ ಅವನನ್ನ ಮೂದಲಿಸಿದೆ. ಆಹಾ! ಎಂತಹ ಶಹಣೆ ಕೊರವ, ಕತ್ತಲು ಕೊಠಡೀಲಿ ನೆರಳು ಬೀಳಲು ಬೆಳಕೆಲ್ಲಿ ಬಂದೀತು ಎಂದೆ. ನನ್ನ ಮನಸ್ಸಿನಲ್ಲಿ ಗಾಂಢೀವ ಪ್ರಯೋಗಮಾಡಿದೆ ಅಂತ.

ವಿನಯವಾಗಿ ಹೇಳಿದ "ಯಾಕೆ ಮಗೂ! ಯಾವಾಗಲಾದರೂ ಎಕ್ಸ್‌ಸೈಜ್ ಕೊಠಡೀಗೆ ಹೋಗಿಲ್ಲವೇ ನೀನು" ಅಂತ.

—ಹೌದಾ! ಅಂತ ಮಂಗಳೂರಿನವರಂದಂತೆ ಅಂದುಕೊಂಡೆ

*   *   *

ಆ ಸಾಯಂಕಾಲ ಹದಿನೈದು ನಿಮಿಷ ಕೊರವ ಬೂಡ್ಸಿನ ಬಲಗಾಲನ್ನ ಬೂಡ್ಸಿನ ಎಡಗಾಲಿಗೆ ತುರಿಸುತ್ತಾ ಇದ್ದ. ಬೂಡ್ಸಿನ ಚವುಡಾ ಬೂಡ್ಸಿನ ಚವುಡಾಕ್ಕೆ ತುರಿಸಿದರೆ, ಇವನಿಗೇನು ಹಿತ ಅಂದುಕೊಂಡೆ. ಕಡೆಗೆ ತಡೆಯು ಲಾರದೆ ಕೇಳಿದೆ.

"ಕೊರವ, ಇದು ಏಕೆ ಹೀಗೆ ಚವುಡದ ಮೇಲಿನ ಚವುಡಾನ ತುರಿಸಿದರೆ ಒಳಗಿರೋ ಚವುಡಾಕ್ಕೆ ಹಿತವೇ?" ಅಂತ.

"ಅಯ್ಯೋ ನನ್ನ ಕಾಲು ಮದ್ರಾಸ್ ಮಂತ್ರಿಗಳಂತೆ ಕಣೋ ! ಅಂದ. ಅರ್ಥವಾಗಲಿಲ್ಲ ಅನ್ನೋ ಹಾಗೆ ಹುಬ್ಬು ಚೀನಿಯರ ತರಹಾ ವಾರೆ. ಮಾಡಿದೆ ಕೊರವ ವಿಶದೀಕರಿಸಿದ "ನೋಡು! ನಾನು ಯಾವಾಗಲೂ ಷೂ ಹಾಕೋ ಅಭ್ಯಾಸ! ಕಾಲು ಥಂಡಾ ಆಗುತ್ತಲ್ಲಾ ಅಂತ ಬೂಡ್ಸು ಹೊಲಿಸಿ ಹಾಕಿಕೊಂಡೆ. ಈಗ ಕಾಲು ಬೆಚ್ಚಗಿದೆ ಆದರೆ ಬೂಡ್ಸು ತೀಟೆ ಹಚ್ಚಿದೆ. ಮದ್ರಾಸ್ ಮಂತ್ರಿ ಗಳ ಹಾಗೆ ಕಣೋ "ಪಾನನಿರೋಧ" ಅಂದರು. ಆದಕ್ಕೇ ಚುನಾವಣೇಲಿ ಸೋತುಹೋದರು ಸೋತುಹೋದೆವಲ್ಲಾ ಸ್ವಲ್ಪ ಸುಧಾರಿಸಿಕೊಳ್ಳೋಣ ಅಂದರೆ ಆ ಪಾನವೇ ಸಿಗದು ಇವರಿಗೆ, ಹಾಗಾಗಿದೆ ನನ್ನ ಪಾಡು!" ಅಂದ.

ಕೊರವನ ಉಪಮೇ ಕೊರವಿಗೇ ಅರ್ಥವಾಗಬೇಕು ಅಂತ ಅಂದುಕೊಂಡೆ.



"ಅಮ್ಮಾ—ಅಪ್ಪ ಮಾಡಿಕೊಟ್ಟಿರೋ ಲೆಕ್ಕ ತಪ್ಪಂತೆ—ಮೇಷ್ಟ್ರು ಹೇಳಿದ್ರು"
"ನಾನು ಮಾಡಿರೋ ಲೆಕ್ಕ ಸರಿಯಾಗಿದೆಯಂತೆ"

## " ಅದೃಷ್ಟ "

ಬೀರ್‌ಬಲ್ ಹೇಳಿದನಂತರ, ಒಮ್ಮೆ "ನನ್ನ ಅದೃಷ್ಟ ಚೆನ್ನಾಗಿತ್ತು ನಿಮ್ಮಂತಹ ಧಣಿ ಸಿಕ್ಕಿದ. ಇಲ್ಲದೇ ಇದ್ದರೆ. ನಾನೂ ಹೇಳ ಹೆಸರಿಲ್ಲದೆ ಇರುತ್ತಿದ್ದೆ" ಎಂದು. ಅಕ್ಬರ್ ಅಂದನಂತೆ "ನಿನ್ನ ಅದೃಷ್ಟ ಹಾಗಿರಲಿ. ನಿನ್ನ ಬುದ್ಧಿವಂತಿಕೆಯೇ ದೃಷ್ಟ ಅದರಿಂದಲೇ ನಾನು ನಿನ್ನನ್ನು ಆ ಸ್ಥಾನಕ್ಕೆ ಕರೆಸಿಕೊಂಡಿದ್ದು" ಅಂತ.

ಬೀರಬಲ್ 'ಉಹ್ಞೂ' ಅಂತ ತಲೆಯಾಡಿಸಿದನಂತೆ. ಅಕ್ಬರನಿಗೆ ಅರ್ಥವಾಗಲು ಒಂದು ಪ್ರಯೋಗ ಸೂಚಿಸಿದನಂತೆ.

ಅದೃಷ್ಟದಲ್ಲೇ ನಂಬಿಕೆಯಿದ್ದ ಯುವಕನೊಬ್ಬ. ಸ್ವಂತ ಪೌರುಷದಲ್ಲೇ ನಂಬಿಕೆ ಇದ್ದ ಯುವಕನೊಬ್ಬ. ಇಬ್ಬರನ್ನೂ ಒಂದು ಕೊಠಡಿಯಲ್ಲಿ ಒಂದು ರಾತ್ರಿ ಕೂಡಿದರಂತೆ. ಅದೃಷ್ಟದಲ್ಲಿ ನಂಬಿಕೆ ಇದ್ದವ ಕತ್ತಲೆ ಕೊಠಡಿಯ ಒಂದು ಮೂಲೆಯಲ್ಲಿ ಮಲಗಿದನಂತೆ. ಅದೃಷ್ಟವಿದ್ದರೆ ಹೊಟ್ಟೆ ತುಂಬುತ್ತೆ ಅಂತ ಅವನ ನಂಬಿಕೆ. ಇನ್ನೊಬ್ಬ ಯುವಕ ನನಗೆ ಹಶಿವು ಹೆಚ್ಚು ಹುಡುಕಿ ನೋಡೋಣ ಏನಾದರೂ ಸಿಗುತ್ತೆಯೇ ಎಂದು ಕತ್ತಲೆಯಲ್ಲಿ ಕೊಠಡಿಯನ್ನು ಹುಡುಕಿ ತಡುಕಾಡಿದನಂತೆ. ಕೊಠಡಿಯ ಮಧ್ಯದಲ್ಲಿ ಒಂದು ಗಂಟು ಸಿಕ್ಕಿತಂತೆ. ತನ್ನ ಮೂಲೆಗೆ ಅದನ್ನು ತೆಗೆದುಕೊಂಡುಹೋಗಿ ಗಂಟು ಬಿಚ್ಚಿ ತಡುಕಾಡಿದಾಗ ನೆಲಗಡಲೆಕಾಯಿ ಸಿಕ್ಕಿತಂತೆ. ಅದನ್ನು ಒಂದೊಂದಾಗಿ ತಿನ್ನುತ್ತಾ ಇದ್ದಾಗ ಮಧ್ಯೆ ಮಧ್ಯೆ ಒಂದೊಂದು ಕಲ್ಲು ಸಿಕ್ಕಿತಂತೆ ಅದನ್ನು ಕೊಠಡಿಯ ಆ ಮೂಲೆಗೆ ಎಸೆದು ಗೆಳೆಯಾ ಅದೃಷ್ಟದಲ್ಲಿ ನಂಬಿದ ನಿನಗೆ ಇದೇ ಗತಿ ಕಲ್ಲೇ ಸಿಗೋದು ಅಂತ ಹೇಳಿದನಂತೆ.

ಗಂಟು ಮುಗಿದಾಗ ಹೊಟ್ಟೆ ತುಂಬಿ ಅವನೂ ಮಲಗಿದನಂತೆ.

ಬೆಳಗಿನಝಾವ ಅಕ್ಬರ್ ಬೀರ್‌ಬಲ್ ಇಬ್ಬರೂ ಬಂದರಂತೆ ಬಾಗಿಲು ತೆರೆದು. ನಿಮ್ಮ ಹತ್ತಿರ ಏನೇನಿದೆ ಅದು ನಿಮ್ಮ ಹತ್ತಿರ ಇರಲಿ ಎಂದು ಹೇಳಿ ಒಳಹೊಕ್ಕರಂತೆ.

ಸ್ವಂತ ಪೌರುಷದವನ ಹತ್ತಿರ ಕಡಲೇಕಾಯಿ ಸಿಪ್ಪೆ—ಅದೃಷ್ಟದವನ ಬಳಿ ವಜ್ರದ ಸಣ್ಣ ರಾಶಿ.

ಬೀರ್‌ಬಲ್ ಎಂದನಂತೆ 'ನೋಡಿದೆಯಾ ದೊರೆ!' 'ಅದೃಷ್ಟ' ·ಅಕ್ಬರ್ ಅಂದನಂತೆ 'ಹೌದು ಬೀರ್‌ಬಲ್' ಅದೃಷ್ಟವುಂಟು ಆದರೆ ನೆಲಗಡಲೇಲಿ ವಜ್ರ ಮಿಶ್ರವಾದಷ್ಟು ಅಪರೂಪ ಅಂತ.

ಆಗ ಹೆಸರಾಂತ ಬೀರಬಲ್. ತಲೆ ತಗ್ಗಿಸಿದನಂತೆ.

# ಫ್ಯಾಮಿಲಿ ಬಿಸಿನೆಸ್ *

"ಏನಂತ್ರಿ.... ಐದು ರೂಪಾಯಿ ಹೆಚ್ಚಿಗೆ ಸಂಬಳ ಬಂದಿದೆಯಲ್ಲ, ಅದನ್ನ ಇನ್ನು ಮುಂದೆ ಪ್ರತಿ ತಿಂಗಳೂ ಯಾವುದಾದರೂ ಹೆಚ್ಚಿನ ಖರ್ಚಿಗೆ ಮೀಸಲಾಗಿ ಟ್ಟುಕೊಳ್ಳೋಣ ಇದ್ದೇ ಇದೆ ನಿತ್ಯ ತಾಪತ್ರಯ... ಒಂದು ದಿನ ಸಿನಿಮ ಪ್ರೋಗ್ರೇಮ್ ಇಟ್ಕೊಳ್ಳೋಣವೆ?"

"ಸರಿ ಕಣೆ, ಅಕ್ಕಿ ಬೆಲೆ ಏರಿಸುತ್ತೀವೆ, ಬಟ್ಟೆ ಬೆಲೆ ಏರಿಸಿದ್ದೇವೆ ಅಂತ ಸರ್ಕಾರದವರು ಐದು ರೂಪಾಯಿ ತುಟ್ಟಿ ಭತ್ಯ ಹೆಚ್ಚಿಸಿದರೆ, ಅದನ್ನ ವಿಚಕ್ಷಣೆಯಿಂದ ಸಂಸಾರದ ಖರ್ಚಿಗೆ ಉಪಯೋಗಿಸಿಕೊಳ್ಳದೆ, ಸಿನಿಮಾ, ನಾಟಕ, ಅಂತ ಕುಣಿದರೆ ಸಂಸಾರ ಹೇಗೆ ಸುಸೂತ್ರವಾಗಿ ನಡೆಯುತ್ತೆ." ?

"ಸುಸೂತ್ರವಾಗಿ ನಡೆಯದೆ ಏನು ಅಂದ್ರೆ... ನನಗೆ ತಿಂಗಳಿಗೆ ಹದಿನೈದು ದಿವಸ ಅಡಿಗೆ ಮಾಡುವ ತಾಪತ್ರಯವಿಲ್ಲ! ಲಕ್ಷಣವಾಗಿದೆ ಈ ಗ್ಯಾರೇಜು— ಗುಡಿಸೋಕೆ ಹೆಚ್ಚು ಶ್ರಮವಿಲ್ಲ. ನಿಮಗೋ ಕುಡಿಪನೀರು ಅಲ್ಲಾಡುವ ಹಾಗಿಲ್ಲ. ಕೂತಕಡೆ ಊಟ. ಉಂಡ ಕಡೆ ಹಾಸಿಗೆ ಸಿದ್ಧ. ಹೇಗೂ ತಿಂಗಳ ಬಜೆಟ್ ತಯಾರಿಸಿದ್ದೇವೆ. ಅದರಂತೆ ಸಂಸಾರ ಸುಸೂತ್ರವಾಗಿ ನಡೆದು ಹೋಗುತ್ತೆ; ಇದಕ್ಕೆ ಯೋಚನೆ ಯಾಕೆ?....ಹೋಗಲಿ ಸಂಸಾರದ ಖರ್ಚಿಗೆ ಯಾವುದಾದರೂ ಹೊಸ ಐಟಂ ಸೇರಿಸುತ್ತೀರೇನು" ?

"ಯಾವ ಐಟಂ ಹೆಚ್ಚಿಸೋಣ, ತಾಂಬೂಲ ಶುರು ಮಾಡೋಣವೆ. ಪ್ರತಿ ತಿಂಗಳೂ ಈ ಹೆಚ್ಚಿನ ಐದು ರೂಪಾಯಿ ಎಲೆ ಅಡಿಕೆ ಖರ್ಚಿಗೆ ಮೀಸಲು! ಆಗಬಹುದೆ?"

"ನಿಮಗೆಲ್ಲೋ ಬಾಲ್ಯ ಮರುಕಳಿಸಿದೆ ಅಂತ ಕಾಣುತ್ತೆ. ಹೊಟ್ಟೆ ತುಂಬ ಹಿಟ್ಟೇ ಇಲ್ಲ. ತುಟಿಗೇಕೆ ಅಂದ್ರೆ ರಂಗು! ಅದರ ಬದಲು ಆ ಮುನಿಸ್ವಾಮೀಗೆ ಹೇಳಿ ಕಾರ್ಕಾಳಹಳ್ಳಿಯಿಂದ ಐದು ರೂಪಾಯಿಗೂ ರಾಗಿ ತರಿಸಿ. ಹುರಿಟ್ಟು ಮಾಡಿಡ್ತೇನೆ. ರಾತ್ರಿ ಹೊತ್ತು ಆ ಗೋಧಿ ರೊಟ್ಟಿ ತಿನ್ನೋ ಬದಲು ಅದನ್ನ ತಿಂದರೆ ಆರೋಗ್ಯವಾಗಿರುತ್ತೆ."

* ಫ್ಯಾಮಿಲಿ ಪ್ಲಾನಿಂಗೂ ಇದಕ್ಕೂ ಏನೂ ಸಂಬಂಧವಿಲ್ಲ.

"ಹಾಗೇ ಅಗ್ಲಿ! ಇನ್ನು ಮೇಲೆ ಡಿಪೋಲಿ ಗೋಧಿ ಕೊಂಡ್ಕೊಳ್ಳೋದುಡ್ಡೆ; ಬ್ಲಾಕ್ ಮಾರ್ಕೆಟ್‌ನಲ್ಲಿ ರಾಗೀನೇ ಕೊಂಡ್ಕೊಳ್ಳೋಣ! .. ನಿನ್ನ ಉತ್ಸಾಹದಲ್ಲಿ ಯಾವ ಯಾವುದಕ್ಕೋ ಆಶಿಪಡುತ್ತೀಯೋ ಹೊರತು ಈ ಐದು ರೂಪಾಯಿ ಖರ್ಚಿಗೆ ಮಾರ್ಗ ತೋರಿಸುವುದಿಲ್ಲ!....ಹೋಗಲಿ....ನಾಳೆಯಿಂದ ನಿತ್ಯವೂ ಒಂದಿಷ್ಟು ತರಕಾರಿ ತರುತ್ತೀನೆ ಆ ದುಡ್ಡಿನಲ್ಲಿ. ತರಕಾರಿ ಅಭ್ಯಾಸ ಮಾಡಿಕೊಳ್ಳೋಣವೇನು?"

"ಅಯ್ಯೋ, ತರಕಾರಿ ಕೊಂಡು ಪೂರೈಸುಕ್ಕೆ ಆಗತ್ತೆ ಅಂತ್ರೆ! ಎರಡೆಸಳು ಕರಿಬೇವಿನಸೊಪ್ಪನ್ನ ಎರಡಾಣೇಗೆ ಮಾರೋ ಕಾಲ....ಬಂದ ಐದು ರೂಪಾಯಿಗೆ ಐದು ದಿನ ತರಕಾರಿ ತಂದು ತಿಂದರೆ ಮುಗಿಯಿತೆ ಈ ಸಂಸಾರ!

"ಅಷ್ಟಲ್ಲದೆ ಮತ್ತೇನೆ....ಎಲ್ಲರೂ ಮಾಡುವುದು ಹೊಟ್ಟೆಗಾಗಿ"

"ಹು! ಮುಂದಕ್ಕೂ ಹೇಳಿ....'ಮಾರು ಬಟ್ಟೆಗಾಗಿ' .. ಈ ಒಂದು ಕುತ್ತಾಲದ ಸೀರೇಲಿ ಕಾಲ ಹಾಕ್ತಿದೇವಲ್ಲ. ನಿಮಗೇನಾದರೂ ಸೀರೆ ತರಬೇಕು ಅನ್ನೋ ಯೋಚನೆ ಇದ್ಯೆ!"

"ಸೀರೆ, ಬಟ್ಟೆಬರೆ ಸಂಬಳದಲ್ಲಿ ಆಗುತ್ತೇನೆ? ಸ್ವಲ್ಪ ಮನಸ್ಸಿಗೆ ಶಾಂತಿ ತಂದುಕೋ"

ಅದಕ್ಕೆ ಬೇರೆ ಯಾವುದಾದರೂ ಮಾರ್ಗಾನೋ, ಮಾರ್ಗಾಂತೀನೋ ಹುಡುಕೋಣ!"

"ಹು! ಯಾವ ಮಾರ್ಗಾನಾದರೂ ಹುಡುಕಿ. ಈ ಐದು ರೂಪಾಯನ್ನ ಏನು ಮಾಡಬೇಕು ಅಂತ ನಿಮ್ಮ ಯೋಚನೆ"

"ಅದೇ ನನ್ನ ಸಮಸ್ಯೆ. ಇನ್ನು ಬಗೆಹರಿದಿಲ್ಲ. ನೀನೇ ತೀರ್ಮಾನ ಮಾಡಿಬಿಡು"

"ಹಾಗಾದರೆ ಒಂದು ಕೆಲಸಮಾಡಿ....ಈ ತಿಂಗಳಿಂದ ಇಜ್ಜಲು ಕರೋ ಹಾಗ....ಐದು ರೂಪಾಯಿಗೂ ಸೌದೇನೂ ತೆಗೆದುಕೊಂಡುಬನ್ನಿ. ಛಳಿಗಾಲ ಹಾಯಾಗಿ ಇನ್ನು ಮೇಲೆ ನಿತ್ಯ ಬಿಸಿನೀರಿನ ಸ್ನಾನ ಮಾಡೋಣ"

"ಸೌದೆಗೇ ಐದುರೂಪಾಯಿ ಪೂರ್ತಿಯಾಗಿ ಖರ್ಚುಮಾಡಿ ಅನ್ನುತ್ತೀಯಾ"

"ಇನ್ನೇನು ನಿಮ್ಮ ಅನುಮಾನ"

"ಅನುಮಾನವೇನೂ ಇಲ್ಲ....ಆದರೆ ನನಗೆ ಹೀಗೆ ತೋಚುತ್ತೆ. ಐದು ರೂಪಾಯಿಗೂ ಸೌದೆ ತಂದು ಎರಡೆರಡು ಚೊಂಬು ಬಿಸಿನೀರು ಹುಯ್ದು ಕೊಳ್ಳೋ ಬದಲು, ಮೂರು ರೂಪಾಯಿಗೆ ಸೌದೆ.. ಎರಡು ರೂಪಾಯಿಗೆ ಎಣ್ಣೆ ಸೀಗೇಪುಡಿ ತಂದು ಮಕ್ಕಳಿಗೆಲ್ಲ ತಿಂಗಳಿಗೊಂದು ದಿನ ಅಭ್ಯಂಜನದ ಏರ್ಪಾಟು ಮಾಡೋಣವೆ ಅಂತ....ಬೆಳೆಯುವ ಮಕ್ಕಳು ಪಾಪ!"

"ನೋಡಿದರ....ನನಗೆ ಈಗ ಥಟಕ್ಕನೆ ಒಂದು ಯೋಚನೆ ಹೊಳೆಯಿತು. ಐದು ರೂಪಾಯನ್ನೂ ಖರ್ಚುಮಾಡಿ ತಿಂಗಳಿಗೊಂದು ದಿನ ಅಭ್ಯಂಜನದ ಏರ್ಪಾಟು ಮಾಡುವುದಕ್ಕಿಂತ, ಒಂದು ವೀಸೆ ಬೆಣ್ಣೆ ತಂದು ನಿತ್ಯವೂ ಒಂದು ಮಿಳ್ಳೆ ತುಪ್ಪ ಹಾಕುವಯೋಚನೆ ಜಾರಿಗೆ ತಂದರೆ ಬೆಳೆಯುವ ಮಕ್ಕಳಿಗೆ ಹೆಚ್ಚು ಸಹಕಾರಿಯಲ್ಲವೆ? ಯೋಚ್ನೆ ಮಾಡಿ!"

"ಅಯ್ಯೋ! ಈಗೇಕೆ ಈ ಹೊಸ ಅಭ್ಯಾಸ! ಅರಿಯದ ಹಸುಳೆಗಳಿಗೆ ತುಪ್ಪದ ಪರಿಚಯ, ಮಹಾ ತಪ್ಪು ...ಅದು ಮಾತ್ರ ಬೇಡ. ನಾಳೆ ಸರ್ಕಾರದವರು ಅಕ್ಕಿ ಬೆಲೆ ಏರಿಸಿದರೆ ಈ ಹೆಚ್ಚಿನ ಐದು ರೂಪಾಯಿ ಮಾಮೂಲು ಖರ್ಚಿಗೇ ಸರಿಹೋಗುತ್ತೆ. ತುಪ್ಪದ ಮಾತೇಕೆ ಆಡುತ್ತೀಯ, ಬೆಪ್ಪೆ"

"ಹಾಗಾದರೆ ಈ ಹೆಚ್ಚಿನ ಐದು ರೂಪಾಯನ್ನ ಏನುಮಾಡಬೇಕು ಅಂತ ನಿಮ್ಮ ಯೋಚನೆ"

"ಅದೇ ನನಗೆ ತಲೆ ತಿನ್ನುತ್ತಿರುವುದು. ನೀನೇ ತೀರ್ಮಾನ ಮಾಡಿ ಹೇಳಿಬಿಡು"

"ಸರ್ಕಾರ ಒಳ್ಳೆ ಸಮಸ್ಯೆ ತಂದುಹಾಕಿತಲ್ಲಪ್ಪ....ಏನಂದ್ರೆ .. ಇದೇ ನನ್ನ ಕಟ್ಟಕಡೆ ಅಭಿಪ್ರಾಯ. ಮಾರ್ಕೆಟ್‌ಗೆ ಹೋಗಿ ಒಂದು ಕುಚ್ಚು ಹೂವು ಕೊಂಡುಕೊಂಡುಬನ್ನಿ. ಹಾಗೇ ದಾರೀಲಿ ಬರ್ತಾ ಒಂದು ಪೊಟ್ಟಣ ಮೈಸೂರು ಪಾಕ್ ಕಟ್ಟಿಸಿಕೊಳ್ಳಿ. ಎಲ್ಲರೂ ಇವತ್ತು ಸಂಜೆ 'ಪಂಗನಾಮ'ಕ್ಕೆ ಹೋಗೋಣ ....ಆಗ್ಲೀನೆ! ಹು! ಅನ್ನಿ"

—ಶಾ. ರಾ.

# ಅಡಿಗೆ ಅಲೋಯೆನ್ಸ್

ಕುಂಠಾಪುರದ ಡಿಸ್ಟ್ರಿಕ್ಟ್ ಡೆಪ್ಯುಟಿ ಕಮೀಷನರ್ ಸಾಹೇಬರವರ ಸನ್ನಿಧಾನಂಗಳಿಗೆ, ವಿಮಲಾಪುರದ ತಾಲ್ಲೂಕು ಅಮೀಲ್ದಾರಿಣಿ ಬರೆದುಕೊಂಡ ಅಹವಾಲು ಅರ್ಜಿ.

ಮಹಾಸ್ವಾಮೀ,

ಈ ಊರಿನಲ್ಲಿ ಚುನಾವಣೆ, ನಂತರ ಎಣಿಕೆ ಈ ಗಲಾಟೆಯು ಕಳೆದ ಎರಡೂ ತಿಂಗಳಿಂದ ಹೆಚ್ಚಾಗಿದೆ. ಸ್ಪರ್ಧಿ ಪ್ರತಿಸ್ಪರ್ಧಿಗಳ ಗಲಾಟೆ ಹಾಗಿರಲಿ. ಈ ಕಾರ್ಯದಲ್ಲಿ ತೊಡಗಿ ತೊಳಲುತ್ತಿರುವ ಊರೂರಿಂದ ಬಂದ ಸರ್ಕಾರದ ನೌಕರರಿಗೆ, ನಮ್ಮ ಯಜಮಾನರು, ನಿಮ್ಮ ಅತ್ಯಂತ ವಿಧೇಯ ಸೇವಕ ಅಮಲ್ದಾರರು, ತಿಂಡಿ ತಿನಿಸು, ಊಟ ಉಪಚಾರ ನಮ್ಮನೆಯಲ್ಲೇ ಆಗುವಂತೆ ಆಗ್ರಹ ಮಾಡುತ್ತಿದ್ದಾರೆ. ಇಷ್ಟು ಖರ್ಚು ಆಗುತ್ತಲ್ಲಾ! ದುಡ್ಡು ಸ್ವಲ್ಪ ಕೊಡಿ ಎಂದರೆ, ನನಗೇನೂ ಸಂಬಳ ಹೆಚ್ಚುಮಾಡಿಲ್ಲ. ಮನೆ ಖರ್ಚಿಗೆ ಆಪತೆ ನೀನೇ ಸರ್ಕಾರಾನ ಕೇಳಿಕೋ ಮದರಾಸಿನಲ್ಲಿ ಮಾಡಿದಹಾಗೆ ಅನ್ನುತ್ತಾರೆ.

ಖಾವಂದರಲ್ಲಿ ನನ್ನ ಬಿನ್ನಹ ಏನೆಂದರೆ, ನನ್ನಂಥಾ ಅರ್ಧ ಸರ್ಕಾರೀ ಚಾಕರಿ ಸಂಬಳ ಇಲ್ಲದೆ ಮಾಡುತ್ತಿರುವ ಮಹಿಳೆಯರಿಗೆ ಕರುಣೆ ತೋರಿ ಘನ ಸರ್ಕಾರಕ್ಕೆ ಶಿಫಾರಸ್ಸು ಮಾಡಿ "ಅಡಿಗೆ ಅಲೋಯೆನ್ಸ್" ಕೊಡಿಸಬೇಕಾಗಿ ವಿನಂತಿ.

ಇತಿ ವಿಧೇಯಳಾದ,

**ವಿಮಲಾಪುರದ ತಾಲ್ಲೂಕು ಅಮೀಲ್ದಾರಿಣಿ.**

—ಸರಸ್ವತಿ ಅನಂತರಾಮಯ್ಯ.



ಕಿಟ್ಟುವಿನ ಹುಡುಗಾಟಿಕೆ (ತಮಾಷೆ), ಪುಟ್ಟುವಿನ ಪ್ರಾಣಸಂಕಟ!

# ಮಿಳ್ಳೇ ಬೀಜ

ನಮ್ಮ ಮನೆಯಿಂದ್ಲೀಗ ಆರುಜನ ಆಸ್ಪತ್ರೆಗೆ ದಾಖಲಾಗಿದ್ದಾರೆ. ಕಾಯಿಲೆ ಕಾರಣ, ಸೇರಿರುವ ಆಸ್ಪತ್ರೆ, ಇತ್ಯಾದಿ ವಿವರಗಳನ್ನು ಕೆಳಗೆ ಕೊಟ್ಟಿದೇನೆ :—

೧) ಸೀನಿ — ಸ್ಯಾನಿಟೋರಿಯಂ.

ಸೆಪ್ಟೆಂಬರ್‌ನಲ್ಲಿ ಫೇಲಾಗಿ ಕೋಣೆಯಲ್ಲಿ ಕೊಳೆಯುತ್ತಿದ್ದ ಹಿರಿಯ ಮಗ. "ಬಾರೋ ಲೌಡ್‌ಸ್ಪೀಕರ್‌ನಲ್ಲಿ ಕೂಗಲಿಕ್ಕೆ!... ದಿನಕ್ಕೆ ಮೂರು ರೂಪಾಯಿ, ಎರಡು ಕಾಫಿ ಮಸಾಲೆ" ಎಂದು ಗೆಳೆಯರು ಕಚಕುಳಿಯಿಟ್ಟರು. ಕೋಣೆ ಯಿಂದ ಕಾರಿಗೆ ಹಾರಿದ. ಅರಚೀ ಅರಚಿದ—ಇವತ್ತು ನೇಗಿಲ ಹಿರಿಮೆಗೆ, ನಾಳೆ ಗುಡಿಸಿಲ ಗುರುತಿಗೆ, ನಾಡಿದ್ದು ಮರದ ಮಹನತ್ತಿಗೆ, ಮೂರನೇದಿನ ದೀಪದ ಹೊಳಪಿಗೆ, ಅದರ ಮಾರನೇದಿನ ಹುಂಜದ ಹೆಮ್ಮೆಗೆ!

ಆರು ದಿನ ಅರಚುವ ಹೊತ್ತಿಗೆ ಆಸಾಮಿ ಕಂಠದಿಂದ ಆರ್ಕೆಸ್ಟ್ರಾ ನಾದದ ಹಾಗೆ ಆರುವತ್ತು ಧ್ವನಿ ಹೊರಡಲಾರಂಭಿಸಿತು. ಉಸಿರಾಡಿಸಿದರೆ ಕೆಮ್ಮು, ಮಲಗಿದರೆ ದಮ್ಮು! ಆಸ್ಪತ್ರೆಗೆ ತೋರಿಸಲು, ಶ್ವಾಸಕೋಶ ಸಹಸ್ರತೂತು, ಸ್ಯಾನಿಟೋರಿಯಮ್ಮೇ ಸಾಕ್ಷಿ ಅಂದರು.

೨) ವಿಜೀ—ವಿಕ್ಟೋರಿಯಾ.

ಕಾಲೇಜು ಮೆಟ್ಟಿದ ಎರಡನೇ ಕುವರಿ. ಇವಳಿಗೂ ಕಾರಣ ಡಿಟೋ—ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ. ಜನವರಿ ಎರಡಕ್ಕೆ ಗಂಟಲು ಕುಂಟು, ಸೊಟ್ಟ ಕುತ್ತಿಗೆ ಆಯಿತು. ತೆರೆದ ಬಾಯಿ ತೆರೆದಂತೆಯೇ, ಮುಚ್ಚಲು ಸಾಧ್ಯವೇ ಇಲ್ಲ! ಅತ್ತೆಮ್ಮನವರು, ಮಗೂಗೆ ದೃಷ್ಟಿಯಾಗಿದೆ. ಆ ಆನಂದಮ್ಮನ ಮನೇ ಆರತೀಲಿ ಹಾಡು ಹೇಳಬಾರದಾಗಿತ್ತು. ಮಗೂ ಕಂಠಕ್ಕೇ ದೃಷ್ಟಿ ಹಾಕಿಬಿಟ್ಟಳು ಆ ಮಳ್ಳಗಣ್ಣಿ ಎಂದು ಗೊಣಗಿ, ಉಪ್ಪು ಮೆಣಸಿನಕಾಯಿ ಧಾರಾಳವಾಗಿ ನೀವಾಳಿಸಿದರು!

ಪಾಪ, ಅವರಿಗೆ ಸತ್ಯಾಂಶ ತಿಳಿಯದು, ನಾನು ಪತ್ತೇ ಹಚ್ಚಿದೆ ಆ ಕಂಠದ ಹೆಮ್ಮೆಯೇ ಇವಳಿಗೆ ಕಂಟಕವಾಯಿತು. ನಮಗೆ ತಿಳಿಯದಂತೆ, ವ್ಯಾನಿನಲ್ಲಿ ಕುಳಿತು, "ಮರೆಯಬೇಡಿ ಮರದ ಗುರುತ", "ನಿಮ್ಮಯ ಭಾಗ್ಯ, ಹೆಮ್ಮೆಯ ಗುರುತು, "ಎತ್ತಿರಿ ತಲೆಯ, ಎತ್ತೂ ನೊಗವೂ" ಇತ್ಯಾದಿ ಸಮ

ಯೋಚಿತ ಕವಿತೆಗಳನ್ನು ಟಾಕೀ ಟ್ಯೂನುಗಳಲ್ಲಿ ಬಾಕೀ ರಾಗಗಳಲ್ಲೂ ಸರಾಗವಾಗಿ ಹಾಡಿದಳಂತೆ, ಕುತ್ತಿಗೆ ಎತ್ತಿಕೊಂಡೇ! ಇದರ ಫಲ....!

**೩) ಮಾಚ್ಚಿ (ಅಂದರೆ ಮಹಾಲಕ್ಷ್ಮಿ)**—ಮೆಟರ್ನಿಟಿ.

ಹಿರಿಯ ಮಗಳು ಮಾರ್ಚಿಯಲ್ಲಿ ಮೋಡ್ಯಂಡ ಆಸ್ಪತ್ರೆ ಸೇರಲಿಕ್ಕಾಗಿ ಬಂದಿದ್ದಳು. ಚೊಚ್ಚಲು ಸಂಭ್ರಮ (ಹಾಯ್!)

ಆದರೆ ನಾಲ್ಕು ಲೌಡ್‌ಸ್ಪೀಕರುಗಳೂ ನಲವತ್ತು ಸ್ವಯಂಸೇವಕರೂ ಒಟ್ಟಿಗೆ ಅರ್ಧರಾತ್ರಿಯಲ್ಲಿ ಆರ್ಭಟಿಸಿದುದರ ಫಲವಾಗಿ ಈಗಲೇ ದಾಖಲಾಗಬೇಕಾಯಿತು. ಅಳಿಯಂದಿರು "ಅಲಕ್ಷ"ಕ್ಕಾಗಿ ಅತ್ತೆಮಾವಂದಿರಮೇಲೆ ಮುನಿಸಿಕೊಂಡಿರುವರಂತೆ!

**೪) ಮಂಗಿ (ತೊಟ್ಟಿಲಲ್ಲಿಟ್ಟಿದ್ದು ಮಂಗಳಾ)**—ನಾರ್ಥಾ.

ಕಿರೀ ಕೂಸು. ಹಾಡು, ಗಾಡಿ, ಕೂಗು. ಕಿರಲು ನೋಡಲು ಹಗಲೆಲ್ಲ ಬೀದಿಗೆ ಓಡುತ್ತಿತ್ತು. ಕೊಟ್ಟ ಕಾಗದ, ಎಸೆದ ಚೀಟಿ ತಪ್ಪದೇ ಪಡುತ್ತಿತ್ತು. (ಇದಕ್ಕೆ ನನ್ನ ಬೆಂಬಲವೂ ಇದ್ದಿತೆಂಬುದಕ್ಕೆ ಸಾಕಷ್ಟು ಕಾರಣಗಳಿಲ್ಲ. ಆದರೂ ಆವಳು ಶೇಖರಿಸಿರುವ ರಾಶಿಯ ಸಹಾಯದಿಂದಲೇ ನಾನು ಒಲೇ ಹೊತ್ತಿಸುತ್ತಿರುವುದು. ಇನ್ನೂ ಒಂದು ತಿಂಗಳು ಸೀಮೆಯೆಣ್ಣೆ ಚಿಂತೆಯಿಲ್ಲ) ಸಧ್ಯ! ಒಂದು ದಿನ ಮೆಟ್ಟಿಲೆಡವಿ ಮೊಣಕಾಲು ಮೂಳೆಯೇ ಮುರಿದುಕೊಂಡಳು. ಪ್ಲಾಸ್ಟರ್ ಹಾಕಿ ಉರುಳಿಸಿದ್ದಾರೆ!

**೫) ಬಾಲೂ**—ಬೌರಿಂಗ್.

ಎರಡನೇ ಕುಲದೀಪಕ. ಬೆಳಗಿನಿಂದ ರಾತ್ರಿಯವರೆಗೂ ಅವನಿಗಿದ್ದುದು ಒಂದೇ ಕೆಲಸ, ಬಾಗಿಲ ಬಳಿ ಕೂತಿರುವುದು ಮನುಷ್ಯಪ್ರಾಣಿಯನ್ನು ಕಂಡೊಡನೆಯೇ, "ಮನೇ ನಂಬರು ಸಿ-ತೊಂಬತ್ತನಾಲ್ಕು. ವೋಟರುಗಳು ಸೀತಾರಾಮಯ್ಯ, ಲಕ್ಷ್ಮಮ್ಮ, ಶ್ರೀನಿವಾಸಮೂರ್ತಿ.. ....ಇವರು ಅಂಗಡೀಗೆ ಹೋಗಿದಾರೆ....ಇವರು ಗುಡೀಗೆ ಹೋಗಿದ್ದಾರೆ.. ಇವನು ಕ್ರಿಕೆಟ್‌ಗೆ... ಹುಂ, ಅಗ್ಲಿ, ಲಗ್ಲಿ ...ಜೋಕ್ತೀನಿ ...ಹುಂ....ನಿಮ್ಗೇ ಕೊಡ್ತಾರೆ....ಹೋಗ್ಬಹುದು .. ಹೋಗ್ಬಹುದು! .." ಎಂದು ಹೇಳುವುದು.

ನಮಗೂ ಹಗೂರಾಗಿತ್ತಿನ್ನಿ. ಮೊದಲು ನಾಯಿ ಕಟ್ಟುವ ಯೋಚನೆ ಮಾಡಿದ್ದೆವು!....ಆದರೆ, ಹಣೇಬರಹ, ಈಗೇನಾಗಿದೆ ಅಂದರೆ, ಮಿಕ್ಕಾದಾಗೆಲ್ಲ ಸರಿಯಾಗಿರುತ್ತಾನೆ. ಹೊಸ ಮನುಷ್ಯರನ್ನು ಕಂಡರೆ ಮಾತ್ರ, ಕೂಡಲೇ ಮನೇ ನಂಬರು ಸೀ-ತೊಂಬತ್ತನಾಲ್ಕು. ವೋಟರುಗಳು....ಹೋಗ್ಬಹುದು,

ಹೋಗ್ಬಹುದು ..." ಅಂದುಬಿಡುತ್ತಾನೆ! ಮೊನ್ನೆ ಬೀಗರು ಬಂದು, ಬಂದ ದಾರಿಯಲ್ಲೇ ಸಹಸ್ರನಾಮ ಮಾಡುತ್ತ ಹಿಂದಿರುಗಿದರಂತೆ! ವೈದ್ಯರು ನೋಡಿ, ನರಗಳ ದೌರ್ಬಲ್ಯ ಅಂದುಬಿಟ್ಟರು!

**೬) ಮನೆಯಾತ**—ಮೆಂಟಲ್ಲು.

(ಬಾಂಧವ್ಯ ವಿವರಣೆ ಅನವಶ್ಯಕ) ಮೊದಲೇ ಮೇಷ್ಟ್ರುತನದ ಮೊಂಕು. ಜೊತೆಗೆ, "ಮರಕ್ಕೆ ಕೊಡಲಿಗೋ, ನೇಗಿಲಿಗೋ, ದೀಪಕ್ಕೋ ಧೂಪಕ್ಕೋ, ಗಾಡಿಗೋ ಗೂಳಿಗೋ? ಮುದಿ ಹುಣಸೇಮರದಲ್ಲೂ ಹುಳಿ ಇದ್ದೇ ಇರುತ್ತೆ, ಆದ್ದರಿಂದ ಕಾಂಗ್ರೆಸ್ಸೇ ಒಳ್ಳೇದಲ್ಲವೇ?....ಹೊಸನೀರು, ಹೊಸ ಆಗಸ, ಚಿನ್ನ ಅನ್ನತ್ತಾರಲ್ಲಾ ಮರಕ್ಕೆ ಮತದಾನ ಮಾಡಲೇ? ದೀಪದ ಬೆಳಕು, ದೇಶಕ್ಕೇ ಬೆಳಕಾದೀತೇನೋ! ..." ಈ ರೀತಿ ಯಾವಾಗ ನೋಡಿದರೂ ಅಳಿದೂ ಮಗುಚೀ ಅಳಿದೂ ಮಗುಚೀ ತಲೆ ಅರ್ಧಕೆಟ್ಟಿತ್ತು. ಜೊತೆಗೆ ಈ ಮಕ್ಕಳ ವೈಭೋಗ ಅದನ್ನು ಪೂರ್ತಿ ಮಾಡಿಬಿಟ್ಟಿತು!

ವೈದ್ಯರೇನೋ ಯಾರಿಗೂ ಪ್ರಾಣಭಯವಿಲ್ಲವೆಂದು ಹೇಳಿದ್ದಾರೆ. ಆದರೆ ಪರ್ಸಿಗೆ ಬಹಳ ಭಯಬಂದಿದೆ. ಈ ನಷ್ಟಕ್ಕೆ ಯಾರು ಜವಾಬ್ದಾರರು? ಮತ್ತು ಇದರ ಪರಿಹಾರವನ್ನು ನಾಳೆ ಕ್ರಾಫರ್ಡ್ ಹಾಲಿನಲ್ಲೂ ದಿಲ್ಲೀ ಶಹರಿನಲ್ಲೂ ಬೆಳಗುವ ಪುಣ್ಯಾತ್ಮರು ನೀಡುವರೆಂದು ನಂಬಲೇ?

ಅಥವಾ, "ಎಳ್ಳಂತೂ ಎಣ್ಣೆಗಾಗಿ ಒಣಗಿತು; ಮಿಳ್ಳೇ ಬೀಜವೇ ನೀನ್ಯಾಕೆ ಒಣಗಿದೆ?" ಎನ್ನುವ ಹಾಗೆ ನಾವು ಮಿಳ್ಳೇ ಬೀಜಗಳೇನೇ? ಈ ಅನುಮಾನವನ್ನು ನಿವಾರಿಸಿದವರಿಗೆ ಅನಂತ ವಂದನೆಗಳು.

—ಬೆಂಗ್ಳೂರು ಸುನಂದಮ್ಮ.

## ತಪ್ಪು ಯಾರದು?

ನನ್ನ ಮೂತಿ? ಸೊಟ್ಟು! ರೋತಿ! ಶುದ್ಧ ಕೋತಿ!....ಒಪ್ಪಿದೆ!
ಯಾರ ಮುಖಕು ಇಲ್ಲದಂಥ ನೂರು ಮೂರು ತಪ್ಪಿದೆ!

ಆದರೇನು? ಅವಿತುಕೊಂಬೆ
ನಾನು ಅದರ ತೆರೆಯಲಿ;
ಮುಂದೆ ಬಂದು ನನ್ನ ಕಾಂಬ
ಪಾಪಿ, ಗೋಳು ಕರೆಯಲಿ!

ಜನರು ನನ್ನ ನೋಡಿ ಎಸೆವ ಥೂ ಛಿ ರಾಶಿ ಎಷ್ಟವು
ಜನಕ ಜನನಿ ಪಾಲಿಗಾಯ್ತು, ನನಗೆ ಒಂದೂ ಸಲ್ಲವು.

# ಕಾಮ ಸಂತತಿ

ಕಾಮ,
ಹೌದು, ಕಾಮ,
ಅಲ್ಲಿ ಕಾಮ, ಇಲ್ಲಿ ಕಾಮ,
ಪದದ ಮುಂದೆ, ಪದದ ಹಿಂದೆ,
ಕಾಮ, ಕಾಮ,
ಎಲ್ಲೆಡೆ.

ಹಂಸಪಾದ, ಅಡ್ಡಗೀಟು,
ಅನುಮಾನದ ಡೊಂಕು ಗುರುತು,
ಆಶ್ಚರ್ಯದ ನೆಟ್ಟಗೀಟು,
ನಡುವೆ ನಡುವೆ, ಅಲ್ಲಿ ಇಲ್ಲಿ,
ಕಾಮ,

ತರುಣ ತರುಣದಲ್ಲು ಕಾಮ.
ಅವರಲ್ಲೊಂದು ತರುಣ ಕಾಮ –
ಕಾಮುಗೇನು ಕಣ್ಣೆ? ಕಿವಿಯೆ?
ಕಾಮುಗುಂಟೆ ಮೆದುಳು ಬಹಳ?—
ದೂರದಲ್ಲಿ ಹೊಳೆದ ಚುಕ್ಕಿ
ಮೇಲೆ ಪ್ರೇಮವಿಕ್ಕಿತು.

ಅಯ್ಯೊ ಅಯ್ಯೊ, ತಾಳಲಾರ
ಅವಳ ನಗಲಿ ಬಾಳಲಾರ,
ಬಾರೆ ಬಾರೆ ಚೆಲುವೆ ಚುಕ್ಕಿ
ತೋರೆ ಮುಖವ, ನಲಿವೆ, ಸಖಿ.
ಕೊರಗಿ ಮರುಗಿ ಕೂಗಿ ರೇಗಿ
ನಿಟ್ಟುಸಿರನು ಹರಿಸಿತು,
ಚುಕ್ಕಿ ನಾಚಿ ಶಿರವ ಚಾಚಿ
ಅಕ್ಕರ ಮರೆ ಅರಸಿತು.

ಕಾಮ ಮೆಲ್ಲನೆದ್ದು ಹೋಗಿ
ಫುಲ್ಲ ನಯನೆ ಚುಕ್ಕಿ ಪಕ್ಕ
ಕೂತು ಹಿಗ್ಗಿ ಮೆರೆಯಿತು;
'ನಾನು ನೀನು ಪತಿಯು ಸತಿಯು
ಅರ್ಧ ಕೋಲನಾಗಿ ಇಲ್ಲೆ
ಲಲ್ಲೆಯಾಡುತಿರುವ. ನಲ್ಲೆ,
ಇಂದು, ಎಂದು, ಮುಂದೆಯೂ,'

* * *

ಬೇಎಗಾಗಿ ಅರ್ಧರಾತ್ರಿ
ಗ್ರಂಥವನ್ನು ಓದೆ ಹುಡುಗ
ಅಸ್ತವ್ಯಸ್ತವಾಕ್ಯವೊಂದು
ತಲೆಗೆ ಬೆಳಕು ಹೊಳೆಯಲಿಲ್ಲ;
ನಾಳೆ ಬಂತೇ ಬಂತು. ಆಗ
ಕಟ್ಟ ಕಡೆಯ ಪಠಣದಲ್ಲಿ—
ಏನಿದೇನಿದಚ್ಚರಿ?
ಅರ್ಧಕೋಲನಾಚೆಗೇ....
ಸಾಲು ಸಾಲು ಚುಕ್ಕಿಮರಿ....
... ............... ...............
ಅದೇ ಕಾಮ ಸಂತತಿ.

[F. W. Thomas ನ್ನುಕರಿಸಿ]

—ನಾ. ಕಾ.

# ಅಖಂಡ ಕರ್ಣಾಟಕದ ಒಲವಿನೋಲೆಗಳು

**ಪ್ರಿಯ ಇವರಿಗೆ,** ಬೆಳಗಾವಿ.

ಈಚೀಚೆಗೆ ಪತ್ರ ಬರಿಯೋದೇ ಬಿಟ್ಟೀರಿ. ಜೀವ ಚಡಪಡಿಸೋಕೆ ಹತ್ತೀದೆ. ಮನಿಸಿಗುಲ್ಲಾಂತ ದಿನಾ ದೂಡಿ, ಇಡೀ ಪಗಾರ ತಿನ್ನಿಕ್ಕೆ ಒಂದು ಆಟಾ ಹೂಡೀರಿ ನೀವು. ಅಪ್ಪಾ ದುಡಿಯೋದು ಬಿಟ್ಟು ಜಡ್ಡಾಗಿ ಮನೀಲಿ ಮಲಗ್ಯಾನೆ. ರೊಕ್ಕಿಲ್ಲದೆ ಭಾಳ ತ್ರಾಸಾಗಿದೆ. ಮಂದೀನ ಬೇಡ್ಲಿಕ್ಕೆ ಹತ್ತೀನಿ. ಹುಡುಗರಿಗೆ ಶಾಲೆ ಬಿಡ್ಸೀನಿ. ಉಡೋ ಅರಿವಿ ಹರಿದು ಹರಿದು ಚಿಂದಿ ಚಿಂದಿ ಆಗ್ಯಾವ. ಊರಿಗೆ ನೀನು ಯಾವ್ಯಾಗ ಹೋಗ್ತೀ ಅಂತ ಅವ್ವ ಮೇಲಿಂದ ಮೇಲೆ ಕೇಳಾಕೆ ಹತ್ತ್ಯಾಳೆ. ಮೋರಿ ತೋರಿಸಲು ನಾಚಿಕೆಯಾಗ್ತದ. ಗಂಡು ಮಂದೀಗೆ ಕೋಡು ಮಾಡ್ಯಾವೇನು? ನೆಹ್ರೂ! ನಮ್ಮಪ್ಪ! ಡ್ರೈವರ್ಸ್ ಆಕ್ಟ್ ಮಾಡ್ಯಾನೆ. ನಾಲ್ಕು ಹಿಂದಿ ಅಕ್ಷರ ಅಭ್ಯಾಸ್ ಆದ್ರೆ ಆತು. ನಿಂಮ ಒಣಾ ಉಸಾಬರೀನೆ ಬ್ಯಾಡಾ! ಕಡ್ಡಿ ತುಂಡು ಮಾಡಿದ್ಹಾಂಗೆ ಹೇಳ್ತೀನಿ! ನನ್ನ ಜತೀಲಿ ಬಾಳ್ವೇ ಮಾಡೋ ಇಚ್ಛಾ ಇದ್ರ ಲಗು ಲಗೂನೇ ಪತ್ರ ಬರೀರಿ. ತಡ ಪಡಾ ಆತೂ ಅಂದ್ರೆ ನಾನು ಖರೇವಾಗಿ ನೇಣು ಹಾಕ್ಕೊಂಡು ಬಿಡೀನಿ.

ಇಂತಿ ನಿಮ್ಮ ಪ್ರಿಯ ಹೆಣ್ತಿ,

**ಲಕ್ಕವ್ವ.**

* * *

**ಬೆಂಗಳೂರು,**

ಮರುದಿನವೆ!

**ಮಹರಾಯಿತಿ,**

ನಿನ್ನ ಪತ್ರ ಮುಟ್ಟಿತು. ಅದು ಅಗ್ನಿ ಭಯಂಕರ ಇದ್ದರೂ ನಾನು ಹೇಳೋದನ್ನು ಕೇಳು. 'ಪಗಾರ' ಇಷ್ಟರಲ್ಲೇ ಜಾಸ್ತಿ ಆಗಬಹುದು. ಚಾಮ ರಾಜಪೇಟೆ ಕೊನೇಲಿ ಮನೆ ಮಾಡೀನಿ. ನಳ ಲೈಟು ಎಲ್ಲಾ ಇವೆ. ಫುಡ್ಡು ಡಿಪ್ರೋಕ ವರ್ಗ ಆಗೇದ ಅಕ್ಕಿ ಸಕ್ರಿ ಪಕ್ರಿ ಎಲ್ಲಾ ಜಮಾಯ್ಸೀನಿ. ಇಜ್ಜಲು ಮೂಟೆ ರಗಡು ಹಾಕ್ಸೀನಿ. ಚಲೋ ಬ್ಯಾಳಿ ಬಂದ್ಯಾವ. ಅಗ್ಧಿ ಸೊಸೈಟೀಲಿ ಅರಿವಿ ಬಂದಿದ್ದು ಹರಿಸಿ ಇಟ್ಟೀನಿ. ರೊಕ್ಕ ಕಳಿಸಿ ತಾರು ಬಡೀತೀನಿ. ಟೇಷನಕ್ಕೂ ಬಂದಿರ್ತೀನಿ. ನೀನೂ ಸಾಯೋ ವಿಚಾರ ತಲೀಲಿ ತರಬ್ಯಾಡ. ಇಲ್ಲೀಗೆ ಬಂದಮ್ಯಾಗ ನೋಡಿಕೊಳ್ಳೋಣು.

ಅತ್ತೇಮಾವಗೆ ಶರಣಾರ್ಥಿ ತಿಳಿಸು. ನಿನ್ನ,

**ಜೀವಣ್ಣರಾಯ.**

("ಶಿವದಾಸ್")

# ಈಜಾಸು ಬಾಹು

ಈಸಬೇಕು, ಈಸಿ ಜೈಸಬೇಕು ಎಂದರು, ಎಂದೋ, ಪುರಂದರ ದಾಸರು. ನಮ್ಮೂರು ಹರಿಯಾಚಾರ್ರು ಈಸಿ ಜೈಸೇಬಿಟ್ಟರು, ರಾಯರ ಮಗಳನ್ನ.

ಅದು ಹೇಗೆ? ಹರಿಯಾಚಾರ್ರಿಗೆ ಈ ಜನ್ಮದಲ್ಲಿ ಲಗ್ನವೇ ಇಲ್ಲ, ಎಂದು ಊರಿನವರೆಲ್ಲ ಹೇಳುತ್ತಿದ್ದರಲ್ಲಾ? ಅಂಥದ್ದರಲ್ಲಿ, ಆ ಕನ್ಯಾರತ್ನವನ್ನ ಅವನು ಹೇಗೆ ಅಪಹರಿಸಿದ ಎಂದು ನೀವು ಕೇಳಬಹುದು.

ಉತ್ತರ ಹೇಳುತ್ತೇನೆ. ದೊಡ್ಡ ಕಥೆ ಅದು. ಸಂಗ್ರಹವಾಗಿ ಶೃತಪಡಿಸುತ್ತೇನೆ. ದಯವಿಟ್ಟು ಕಿವಿ ಬಿಚ್ಚಿ.

ಮಂಗಳಾಬಾಯಿಯನ್ನು ಹರಿಯಾಚಾರ್ರು ಎಸ್ಸೆಸ್ಸೆಲ್ಸಿಯಲ್ಲಿದ್ದಾಗಲೇ ಪ್ರೀತಿಸುತ್ತಿದ್ದ, ಕಾಗದ ಪತ್ರಗಳ ರವಾನೆ ನಡೆಯುತ್ತಿತ್ತು. ಅರ್ಧರಸ್ತೆಯಲ್ಲಿ ಕಾದುನಿಂತು ಮಾತಾಡುವರು. ಎಂದಿಲ್ಲ ನೀವು ಕೇಳಿಯೇ ಇದ್ದೀರಿ. ಹುಡುಗಿ ಪಾಸುಮಾಡಿದ ವರ್ಷವೇ ಹರಿಕೂಡ, ಬಹಳ ಮೆಹನತ್ತು ನಡೆಸಿ, ತಾನೂ ಪಾಸುಮಾಡಿದ, ಅವಳ ತಂದೆಯ ಗೌರವ ಪಡೆಯುವುದಕ್ಕಾಗಿ.

ರಾಯರು ನಮ್ಮ ಪ್ರಾಂತದಲ್ಲೆಲ್ಲ ಭಾರಿ ಈಜುಗಾರ. ಅದ್ದರಿಂದ, ಹರಿಯಾಚಾರ್ರುಕೂಡ ಅವಳನ್ನು ಪಡೆಯುವ ಉದ್ದೇಶದಿಂದಲೇ, ಅಮಾವಾಸ್ಯೆ ಸೂರ್ಯಗ್ರಹಣ ಇತ್ಯಾದಿ ಪರ್ವಕಾಲಗಳಲ್ಲಿ ಸಮುದ್ರಸ್ನಾನಮಾಡುತ್ತ ಅಲೆಗಳಿಗೆ ಎದೆ ಕೊಟ್ಟು ಊರವರ ಮುಂದೆ ಪ್ರತಿಭೆಯನ್ನು ಬೆಳಗಿ, ಈಜಿ ಹೊರ ಬರುವಾಗ, ಎದೆ ತುಂಬ, ಮುದ್ರೆ ಒತ್ತಿ, ಮೆರೆದದ್ದು.

ಆದರೂ, ರಾಯರು ಜಗ್ಗಲಿಲ್ಲ. ಊಹೂಂ, ಎಂದು ನಕಾರ ತೆಗೆದರು. ಮಂಗಳಾಬಾಯಿಯ ಮನ ಹರಿಯಾಚಾರ್ರಲ್ಲೇ ನಟ್ಟಿತ್ತು. ಅವಳಿಗೆ ದಿಕ್ಕು ತೋಚಲಿಲ್ಲ. ಒಂದು ದಿನ ಅವಳು ಹರಿಯನ್ನು ಗುಪ್ತವಾಗಿ ಕಂಡು, "ಆಯಿತು ಇನ್ನು ನನ್ನ ಆಸೆ ಬಿಟ್ಟು, ಬಿಡಿ" ಎಂದು ಅಟಂ ಬಾಂಬಿಸಿಯೇಬಿಟ್ಟಳು.

ಆದರೆ, ಹರಿಯಾಚಾರ್ರು ಅಂಥ ಬಡ ನಾಗಸಾಕಿಯೆ? ಹೇಡಿ ಹಿರೋಷೀಮನೆ? ಅವನು ಒಂದು ಸವಾಲ್ ಹಾಕಿದ. "ನೋಡು, ಮಂಗಳಾ! ಮುಂದಿನ ಅಮಾವಾಸ್ಯೆ ದಿನ, ನಿನ್ನ ತಂದೆ ಸಮುದ್ರಕ್ಕಿಳಿದಾಗ, ಯಾರಿಂದಾದರೂ ಅವರ ಕಾಲಿಗೆ ಟಾಂಗ್ ಕೊಡಿಸಿ, ಹೊಟ್ಟೆ ತುಂಬ ಉಪ್ಪುನೀರು ಕುಡಿಸಿ, ನಾನು ಅವರನ್ನುಳಿಸಿ ಎಳೆದು ತಂದು ಮರಳಮೇಲೆ ಮಲಗಿಸಿ, ಪ್ರಥಮ ಚಿಕಿತ್ಸೆ ನಡೆಸಿ

ದರೆ, ಪ್ರಾಣರಕ್ಷಣ ಎಂದು ಅವರು ನನ್ನ ಕೊರಳನ್ನು ಬಿಗಿದಪ್ಪಿ, ನಿನ್ನನ್ನು ನನಗೆ ಕೃತಜ್ಞತಾ ಪೂರ್ವಕವಾಗಿ, ಲಗ್ನ ಮಾಡಿ ಕೊಡುವುದಿಲ್ಲವೆ?" ಎಂದ.

ಮಂಗಳಾಬಾಯಿ, "ಇಲ್ಲ" ಎಂದಳು "ತನಗೆ ಚೆನ್ನಾಗಿ ಈಜು ಬರುತ್ತದೆ, ತನ್ನ ಈಜಾನು ಬಾಹುಗಳಿಗೆ ಜಗ ಜನ್ನೂ ತಕ್ಕ ಕಂಕಣ ತೊಡಿಸಿಲ್ಲ, ಎಂಬುದು ಅವರ ಕೊರಗು! ಆದ್ದರಿಂದ, ನೀವೆ ನೀರಲ್ಲಿ ಮುಳುಗಿ, ಅಂತಕನ ನೆರೆಯೂರು ತಲುಪಿದರೆ, ಅವರು ಓಡಿಬಂದು ನಿಮಗೆ ಪ್ರಾಣದಾನ ಮಾಡಿದರೆ, ಆ ಸಂಗತಿ ಪೇಪರಲ್ಲಿ ಪ್ರಕಟವಾದರೆ, ತನ್ನ ಈಜುಗಾರಿಕೆಯ ಹೆಚ್ಚುಳ ನಿಮ್ಮ ಮೂಲಕ ಜಗತ್ತಿಗೆ ತಿಳಿಯಿತಲ್ಲಾ ಎಂದು ಸಂತೋಷದಲ್ಲಿ, ಒಂದುವೇಳೆ ನನ್ನನ್ನು ಕೊಟ್ಟರೂ ಕೊಟ್ಟಾರು" ಎಂದಳು.

ಆಗ ಹೊಳೆಯಿತು ಹರಿಯಾಚಾರ್‍ರಿಗೆ ಹೊಸ ಯುಕ್ತಿ. ಅಮಾವಾಸ್ಯೆನೂ ಬಂತು, ಪಂಚಾಂಗದಲ್ಲಿ ರಾಯರು ಸ್ನಾನಮಾಡಲು ಆರಿಸಿದ್ದ ತಾಣದ ಅನತಿ ದೂರದಲ್ಲೇ ಹರಿಯಾಚಾರ್‍ರು, "ಅಯ್ಯೋ! ಸತ್ತೆ" ಎನ್ನುತ್ತ. ನೀರೊಳಕ್ಕೆ ಮುಳುಗಿ, ಕೈ ಬಡಿಸಿ, ಕರೆದ.

ರಾಯರ ಕಿವಿ ನೆಟ್ಟಗಾಯಿತು. ಅವರು ಹರಿಯ ಕೈಗಳ ಕಡೆಗೆ ಧಾವಿಸಿದರು. ಗುಳುಂ ಎಂದು ಅಲೆಯೊಳಕ್ಕೆ ನುಸುಳಿ ಅವನ ಹೆಕ್ಕತ್ತನ್ನು ಹಿಡಿದೆತ್ತಿ ಮೇಲಕ್ಕೆದ್ದರು. ಉಸಿರಿಗಾಗಿ.

ಆಗ, ಹರಿ ಒಂದು ಕಮಾಲ್ ಮಾಡಿದ ಪ್ರಾಣಭೀತಿಯಿಂದ ಬುದ್ಧಿ ಭ್ರಮಣೆಯಾದವನಂತೆ ನಟಿಸಿ, ಅವನು ರಾಯರ ಸೊಂಟವನ್ನು ಬಿಗಿಯಾಗಿ ಹಿಡಿದು ಅವರನ್ನು ನೀರೊಳಕ್ಕೆಳೆದು, ಬಲಗಾಲಿಂದ ಅವರ ಬೆನ್ನಿಗೆ ಒಂದು ಬಿಟ್ಟ.

ರಾಯರು ಮುಳುಗಿಸಿದರು. ಮೇಲಿದ್ದು ನಾರಾಯಣಾ, ಎಂದು ಕೂಗಿದರು. ಹರಿ ಅವನನ್ನು ಮತ್ತೆ ಒಳಕ್ಕೆಳೆದ. ರಾಯರ ಹೊಟ್ಟೆಗೆ ಉಪ್ಪುನೀರಿಳಿಯಿತು. ಬಾಯಿಂದ ತುಳಕಿತು. ಅವರು ವೈಕುಂಠದ ಹೊರಬಾಗಿಲನ್ನು ಕಂಡರು.

ಆ ಸಮಯವನ್ನೇ ಕಾದಿದ್ದ ಹರಿಯಾಚಾರ್ ಅವರ ಜುಟ್ಟಿಗೆ ಮುಷ್ಟಿ ಬಿಗಿದು, ಅವರನ್ನು ಮಾರಳ ಮೇಲಕ್ಕೆಳೆದುಕೊಂಡ ಎಚ್ಚರಿಕೆ ಬರುತ್ತಲೂ, ರಾಯರು ಹರಿಯನ್ನು ವೀರಾಧಿವೀರ, ಎಂದು ಹೊಗಳಿದರು. "ನೋಡಪ್ಪ! ನಿನ್ನ ಪ್ರಾಣವನ್ನು ನಾನು ಉಳಿಸಿದ್ದು, ನೀನು ನನ್ನ ಪ್ರಾಣ ಉಳಿಸುವುದಕ್ಕಾಗಿ ಮಾತ್ರ, ಎಂದು ಜನ ದೂರಬಾರದು. ನೀನು ನನ್ನ ಅಳಿಯನಾಗಲೇಬೇಕು" ಎಂದರು.

ಇನ್ನೇನು? ಈಸಿ ಜೈಸೇಬಿಟ್ಟ, ಹುಡುಗ.

—ಪಾಟೀಲ.

# ಕೋಗಿಲೆ

---

ಕೋಗಿಲೆ! ಕೋಗಿಲೆ! ಎಂಬರು ಕವಿಗಳು;
ಮಾಮರದೆಲೆಯೇ ಆಹಾರ.
ಮಾಮರವಿಲ್ಲದ ದೇಶಗಳಲ್ಲಿ
ಕೋಗಿಲೆಗಿಲ್ಲವೆ ಆಧಾರ? ೧

ಕುಹೂ ಕುಹೂ ಕೂಗುತ ದಂಪತಿ
ವಸಂತಸೇನೆಯ ಸ್ವಾಗತಿಸೆ,
ಗೂಡನು ಜೋಡಿಸಿ ಮನೆಯನು ಹೂಡುವ
ಗೋಜೇ ಇಲ್ಲವು, ಸತಿಪತಿಗೆ. ೨

ಗರ್ಭಿಣಿ ಹೆಂಗಸು ಮನೆ ಮನೆ ತಿರುಗಿ
ಕಾಗೆಯ ಗೃಹದಲಿ ಪ್ರಸವಿಸಲು
ಅರ್ಭಕರಲ್ಲೇ ಬೆಳೆಯಲಿ, ಎನ್ನುತ
ಹೊರಟೇ ಬಿಡುವಳು, ಮಾರವ್ವೆ. ೩

ಸಾಕಿದ ತಾಯಿಯ ಭಾಷೆಯ ಮಾತ್ರ
ಕೃತಘ್ನ ಕೋಗಿಲೆ ಕಲಿತಿಲ್ಲ
ಕಾಕಾ ಎಂಬುವ ಕಾಗೆಯ ನೋಡಿ
ಕುಕ್ಕೂ, ಎನುವುದು ಸಾಕುಮಗು. ೪

ಕುಕ್ಕೀ ಕುಕ್ಕೀ ತಾಯಿಯ ಮಕ್ಕಳ
ಮರದಿಂದಾಚೆಗೆ ನೂಕುವುದು.
ಹಾಹಾ ಜಾಣಾ, ನಿನ್ನಯ ಗಾನ,
ಎನ್ನುತ ಕವಿಗಳು ಕುಣಿಯುವರು. ೫

ಸವಿಯಲು ಬದುಕನು ಮೂರಕ ತನದಲಿ
ಕ್ರೌರ್ಯದಿ ಮುಳುಗಿಹ ಹಕ್ಕಿಯ ಹೊಗಳುವ
ಕವಿಗಳು, ಇವರಿಗೆ, ಕನಿಕರವಿಲ್ಲ!
ಕಿವಿಗಳು ಉದ್ದನೆ ಇದ್ದರೆ ಸಾಕೆ? ೬

—ಶೇವಣ್ಣ.

# ಕಿವಿ ವೈದ್ಯ

ರಾಜೀವಪುರದಲ್ಲಿ ನಾಲ್ಕು ಉಪನ್ಯಾಸ ಮಂದಿರಗಳಿವೆ; ಅವು ಅಲ್ಲದೆ. ಊರೊಳಗೆ ಎಂಟು ಚೌಕಗಳೂ ಹತ್ತು ಆಟದ ಬಯಲುಗಳೂ ಇವೆ. ಇವೆಲ್ಲಕ್ಕೂ ಒಂದು ದಿನವಾದರೂ ಬಿಡುವು ಇರುವುದಿಲ್ಲ. ಜನವೇನೋ ಬಡವರು, ಅನಾರೋಗ್ಯದಿಂದ ನರಳುವವರು, ದ್ವೇಷಾಸೂಯೆಗಳಿಂದ ಪಾರ್ಟಿ ಜಿದ್ದು ಎದ್ದು ಪರಸ್ಪರ ವಿನಾಶಾಭಿಲಾಷಿಗಳು. ಆದರೂ, ಮಾತಿನಮಲ್ಲರು.

ಕರ್ನಾಟಕ ಸಂಘದವರು ಕಳೆದ ವಾರ ಏರ್ಪಡಿಸಿದ ನಾಡಹಬ್ಬದಲ್ಲಿ ಸುಮಾರು ಹದಿನಾರು ಉಪನ್ಯಾಸಗಳು ಜರುಗಿದುವು. ಕರ್ನಾಟಕದ ಗತವೈಭವವನ್ನು ಕುರಿತು ನಾಲ್ಕು, ಕನ್ನಡಿಗರ ಮೇಲ್ಮೈ, ಕನ್ನಡದಲ್ಲೇನಿಲ್ಲ, ಕನ್ನಡ ಸಾಹಿತ್ಯವೂ ಜಗತ್ಸಾಹಿತ್ಯವೂ, ಪಂಪನೂ ಪೋಪನೂ, ಎಂಬ ಭಾಷಣಗಳು ಐದು, ಕನ್ನಡಿಗರ ಅನ್ನದಾನದ ವಿಷಯವಾಗಿ ಮೂರು ಮಾಲೆಗಳು, ಏನೇ ಬರಲಿ ಎಂಬುದರಮೇಲೆ ಒಂದು, ಅಖಂಡ ಕರ್ನಾಟಕದಮೇಲೆ ಮೂರು ಮಹಾ ವ್ಯಾಖ್ಯಾನಗಳು—ಹೀಗೆ ಹದಿನಾರು ನಭೋಮಂಡಲವನ್ನು ಭೇದಿಸಿದುವು. ತಮಗೆ ಭಾಷಣ ಕೊಡಲು ಅವಕಾಶ ಕೊಡಲಿಲ್ಲವೆಂದೂ, ಹೊರಗಡೆಯವರನ್ನೇ ಕರೆಯಿಸಿ ಹಾರ ಹಾಕಲಾಯಿತು ಎಂದೂ, ಗಲಾಟೆ ಎಬ್ಬಿಸಿ, ನಿನ್ನೆ ತಾನೆ, ನಮ್ಮೂರಲ್ಲಿ "ಸ್ಥಳೀಯ ಕರ್ನಾಟಕ ಸಂಘ" ಎಂಬ ಮತ್ತೊಂದು ಸಂಸ್ಥೆ ಹುಟ್ಟಿಕೊಂಡಿದೆ.

ಹೀಗೆಯೇ, ಒಂದು ಒಡೆದು ಎರಡಾಗಿ, ಎರಡು ನಾಲ್ಕಾಗಿ, ನಾಲ್ಕು ಹದಿನಾರಾಗಿ, ಊರು ತುಂಬ ಸಂಘಗಳೇ, ರಾಜೀವಪುರದಲ್ಲಿ. ತರುಣರ ತಂಡ, ನಿಯೋ-ತರುಣರ ತಂಡ, ಹಳೇ ಟೌನ್ ಕ್ಲಬ್, ಸುಧಾರಿತ ಟೌನ್ ಕ್ಲಬ್, ಮಹಿಳೆಯರ ಸಂಘ, ಮುತ್ತೈದೆಯರ ಸಮಾಜ, ಕಲಾ ಸಂಘ, ಖಂಡನಾ ಸಂಘ, ಕಲಾ ಪ್ರೇಮೀ ಸಂಘ, ಪುರುಷ ನೃತ್ಯ ಸಮಾಜ, ಮಹಾ ಜನ ನೃತ್ಯ ಸಮಾಜ, ಇತ್ಯಾದಿ ಸಾರ್ವಜನಿಕ ಸಂಸ್ಥೆಗಳೆಷ್ಟೋ! ಸಾಕಷ್ಟು ಜನ ಚಂದಾ ಕೊಡದೆ ಹಿಂದೆಬಿದ್ದರು ಎಂದರೆ ಸರಿ, ತಕ್ಷಣವೇ ಅವರು ತಮ್ಮದೇ ಆದ ಒಂದು ಪ್ರತ್ಯೇಕ ಸಂಸ್ಥೆಯನ್ನು ರಚಿಸಿ, ಚಂದಾ ಕೇಳುತ್ತಿದ್ದ ಕಾರ್ಯದರ್ಶಿಯನ್ನು ಟೀಕಿಸಿ ಮೂದಲಿಸುವರು.

ಅಂತೂ, ನಮ್ಮೂರಲ್ಲಿ ಭಾಷಣಗಳಿಗೆ ಬರಗಾಲವೇ ಇಲ್ಲ. ಊರಲ್ಲಿರುವ ಶಾಲೆಗಳಿಗೆಲ್ಲ ದಿನವೂ ೩ ಗಂಟೆಯಾದನಂತರ, ಪಾಠವೇ ಇಲ್ಲ. ಕಾರ್ಯದರ್ಶಿ ಹೋಗಿ, ಮಾಸ್ತರುಗಳನ್ನು ಬೆದರಿಸಿ ನೋಟೀಸ್ ಹೊರಡಿಸಿಯೇ ಬಿಡುವರು. ನಮ್ಮೂರು ಮಾರ್ಗವಾಗಿ ಬಸ್ಸುಗಳಲ್ಲಿ ಬರುವ 'ಮುಂದಿನ ಸೀಟಿನವರ'ನ್ನು

ಹಿಡಿದು ನಿಲ್ಲಿಸಿ, ಪ್ರತಿ ದಿನವೂ ಅವರಿಂದ ಎಲ್ಲಾದರೂ ಒಂದು ಕಡೆ ಭಾಷಣ ಏರ್ಪಡಿಸಿಯೇ ಏರ್ಪಡಿಸುತ್ತಾರೆ. ಊರಿನವರಿಗೂ ಅಷ್ಟೆ; ದಿನವೂ ಸಂಜೆ ಮಾತಾಡಬೇಕು, ಅಥವಾ, ಮಾತುಕೇಳಬೇಕು. ಮಹಿಳೆಯರೂ ಕೂಡ, ಇದಕ್ಕಾಗಿ ತಾವು ಸೇರುವ ‘ಹಾಲು’ಗಳಲ್ಲಿ ಯಾವುದಾದರೊಂದು ದೇವ ವಿಗ್ರಹವನ್ನಿರಿಸಿ, ಅದಕ್ಕೆ ದೇವಸ್ಥಾನವೆಂದು ಹೆಸರಿಟ್ಟು, ಆ ದೇವರನ್ನೇ ಅಧ್ಯಕ್ಷರಾಗಿ ಅರಿಸಿ, ತಮ್ಮ ಉಪನ್ಯಾಸಮಾಲೆಗಳನ್ನು ನೆರವೇರಿಸುತ್ತಾರೆ.

ಬೆಳಗ್ಗೆ ಪ್ರಚಾರ ಭಾಷಣಗಳು, ಸಂಜೆ ದೇಶಾಭಿಮಾನ ಭಾಷಾಭಿಮಾನ ಭಾಷಣಗಳು, ರಾತ್ರಿ ವೇದಾಂತ ಭಗವದ್ಗೀತೆ ವೈರಾಗ್ಯ ಮುಖ್ಯವಾದ ಭಾಷಣಗಳು ಎಂದು ಊರಿನ ಕಾರ್ಯದರ್ಶಿಗಳೆಲ್ಲ ಸೇರಿ ಒಂದು ಒಪ್ಪಂದಕ್ಕೆ ಬಂದಿದಾರೆ. ಸಂಜೆಯ ಭಾಷಣಗಳೆಲ್ಲ ಹಿಂದೆ ಬಯಲುಗಳಲ್ಲೇ ಆಗುತ್ತಿದ್ದುವು. ಆದರೆ, ಕಳೆದ ತಿಂಗಳು ರಸ್ತೆ ರಿಪೇರಿಗಾಗಿ ಅಲಲ್ಲಿ ಜೆಲ್ಲಿ ರಾಶಿ ತುಂಬಿರಿಸಿರುವುದರಿಂದ, ಸುರಕ್ಷಿತವಾದ ಮಂದಿರಗಳಲ್ಲೇ ಈಗ ನಡೆಯುತ್ತಿವೆ. ರಾತ್ರಿ ಭಾಷಣಗಳೆಲ್ಲ ಆಧ್ಯಾತ್ಮಿಕವಾದ್ದರಿಂದ, ಯಾರೂ ಒಳಕ್ಕೆ ಚಪ್ಪಲಿ ವಗೈರೆ ತರಬಾರದೆಂದು ಮಾಡಿದಾರೆ. ಇದುವರೆಗೂ ಯಾವ ಅನಾಹುತವೂ ಇಲ್ಲದೆ, ಭಾಷಣಕಾರರು ಮನೆಗೆ ತೆರಳಿದಾರೆ.

ಇಷ್ಟೊಂದು ಭಾಷಣಗಳನ್ನು ಕೇಳುತ್ತಿರುವ ರಾಜೀವಪುರದ ಆಸ್ಪತ್ರೆಗೆ ಕಿವಿ ಡಾಕ್ಟರೊಬ್ಬರನ್ನು ಕೂಡಲೇ ನಿಯಮಿಸಬೇಕೆಂದು ಮೊನ್ನೆ ಮುನಿಸಿಪಲ್ ಪ್ರೆಸಿಡೆಂಟ್‌ರವರು ಮನವಿ ಹಾಕಿರುವುದು ಸಹಜವಾಗಿಯೇ ಇದೆ.




ಆಕಾಶವಾಣಿ—ಇನ್ನೊಂದು ನಿಮ್ಮ ಹಳೆಯ ಮೆಚ್ಚಿನ ಗೀತೆ.

# ಅವಮಾನದ ಅರ್ಧಾಂಗಿ

"ಅವರೇಕಾಯಿ ಹುಳಿ ಬಲು ಚೆನ್ನಾಗಿತ್ತು ಕಣೇ! ಅಂದಹಾಗೇ ಆ ಹುರುಳಿ ಹಪ್ಪಳ ಎಲ್ಲಿಂದ ತಂದಿದ್ದೇ? ಯಾರ ಅಂಗಡೀದು?"

"ನಮ್ಮ ಅಕ್ಕನ ಮನೇದು ಅಂದರೆ ಹಪ್ಪಳ. ಅಂಗಡಿ ಹಪ್ಪಳ ಹಾಗಿರುತ್ಯೇ? ಅವರೇಕಾಯಿ ಹುಳಿ ಯಾರು ಮಾಡಿದರೂ ಚೆನ್ನಾಗಿರುತ್ತೆ ಅಲ್ಲವೇ ಅಂದ್ರೆ."

"ಉಂಟೇ! ಉಂಟೇ. ನೀನೇ ಎಷ್ಟೋ ಸಾರಿ ಮಾಡಿದ್ದಿ ಅವರೇಕಾಯಿ ಹುಳೀನ ಆದರೆ ಈ ರುಚಿ ಈ ಘಮ ಘಮ ಈ ಸೊಂಪು, ಈ ಸೊಬಗು ಎಂದೂ ಇತ್ತಿಲ್ಲ!"

"ಇರಬಹುದು ಅಂದ್ರೆ. ಯಾರೋ ದೊಡ್ಡೋರು ಹೇಳಿದರಂತಲ್ಲ–ಮನಸ್ಸು ಖುಷಿಯಾಗಿದ್ದರೆ ಮಾಡಿದ ಅಡಿಗೆ ಬಲು ರುಚಿ ಅಂತ. ಹಾಗಾಗಿರಬಹುದು."

"ಅದೇನೇ ಅಷ್ಟು ಖುಷಿ ನಿನ್ನ ಮನಸ್ಸಿಗೆ, ನನಗೇನೂ ಈ ಡಿಯರ್‌ನೆಸ್ ಅಲೋಯನ್ಸ್ ಸಿಗಲಿಲ್ಲವಲ್ಲಾ."

"ಅದ್ಯಾಕೆ ಬೇಕೂ ಅಂದರೆ—ಬೆಳಿಗ್ಗೆ ಕಛೇರಿ ಅಂತ ನೀವು ಹೊರಟು ಹೋದ್ರಿ. ಅಡಿಗೆಮನೆ ಒಲೆ ಹಚ್ಚಕ್ಕೆ ಅಂತ ಅವತ್ತಿನ ಪತ್ರಿಕೆ ಜೋಡಿಸ್ತಾ ಇದ್ದೆ. ದೊಡ್ಡಕ್ಷರ ಕಾಣಿಸಿತು. ಅದನ್ನು ಓದಿದೆ ಮನಸ್ಸು ಹಗೂರಾಯ್ತು ಬೇಗ ಒಲೆ ಹತ್ತಿತು. ಬೇಳೆ ಬೇಗ ಬೇಯ್ತು, ಹುಳೀಗೆ ಅರೆದುಹಾಕಿದೆ, ನಂಗೇ ಘಮ ಘಮ ಅಂತು. ಅದೇ ಕಾರಣ ಇರಬಹುದು ರುಚೀಗೆ."

"ಯಾವುದೇ ಅದೇ ಕಾರಣ."

"ಅದೇ ಪತ್ರಿಕೆಯ ದೊಡ್ಡಕ್ಷರ"

"ಏನೇ ಅದು."

"ಅದೇ ಶಾಮರಾಯ ಠೇವಣಾತಿ ಕಳೆದುಕೊಂಡ ಅಂತ ಇತ್ತು."

"ಯಾವ ಶ್ಯಾಮರಾಯನೇ?"

"ನಮ್ಮ ಗಿರಿಜೆ ಗಂಡ ಶಾಮರಾಯ ಅಂದರೆ, ಮಾಮಲೇಪುರದ ಇಹಾಂಡಾರ."

"ಅವನಿಗೆ ಠೇವಣಾತಿ ಕಳೆದು ಹೋದರೆ ನಿನಗೇನೆ ಖುಷಿ."

"ಅಯ್ಯೋ, ನಿಮಗೆ ಗೊತ್ತಿಲ್ಲವೇ ಅಂದ್ರೆ."

"ನಂಗೆ ಗೊತ್ತಿಲ್ಲ ಕಣೇ"

"ಇದೇನು ಅಂದ್ರೆ ಹೀಗಂತೀರಿ. ನಾಲ್ಕು ಮಕ್ಕಳಾಯ್ತು ಇನ್ನೂ ಇದೆಲ್ಲಾ ಗೊತ್ತಿಲ್ಲವೇ? ಮೊದಲ ಮಗಳಿಗೆ ಮದುವೆ ವಯಸ್ಸು ಮೀರುತ್ತಾ ಬಂತು ಇಷ್ಟೂ ನಿಮಗೆ ನಮ್ಮ ನಮ್ಮವರ ಪರಿಜ್ಞಾನ ಗೊತ್ತಿಲ್ಲವೇ?"

"ವಯಸ್ಸು ಬಂತು ದಿಟಕಣೇ ಆದರೆ ಬುದ್ಧಿ ಬರಲೇ ಇಲ್ಲವಲ್ಲೇ! ಇದ್ದ ಬುದ್ಧೀನೂ ಈ ಹುಳಿಯಲ್ಲಿ ಹುರುಳಿ ಹಪ್ಪಳದಲ್ಲಿ ಹಾರಿಹೋಯ್ತಲ್ಲೇ."

"ಹಾಗಲ್ಲ! ಅಂದ್ರೆ, ನಿಮಗೆ ನನ್ನನ್ನು ಕೊಟ್ಟು ಮದುವೆಯಾಗೋಕ್ಕೆ ಮುಂಚೆ ಆ ಶಾಮರಾಯನಿಗೆ ಕೊಡಬೇಕು ಅಂತ ನಮ್ಮಪ್ಪನ ಆಶೆ. ಇನಾಂದಾರ ಹಣವಂತ, ರೂಪವಂತ ಹುಡುಗ, ಅವನೇ ಅಳಿಯ ಆದರೆ ಚೆನ್ನ ಅಂತ ಅಪ್ಪನ ಹಂಬಲ. ಅವ ನನ್ನನ್ನು ನೋಡಿ, ಸನ್ಯಾಸಿಕೆ ತಗೋತೀನಿ ಅಂತ ಸ್ನೇಹಿತರ ಹತ್ತಿರ ಹೇಳಿ ಹೊರಟುಹೋದ. ಆವಾಗಿನಿಂದ ಅವನಮೇಲೆ ನನ್ನ ಕಣ್ಣು. ಅವನು ಮಣ್ಣು ಮುಕ್ಕಿದಕೆ ನನಗೆ ಬಲು ಖುಷಿ. ನನ್ನ ಜತೆಗಾರ್ತಿ ಮಿಟಕ ಲಾಡಿ ಗಿರಿಜೆ ಅವನ್ನ ಮದುವೆಯಾದಾಗ ನಾನು ಬಾದಾಮಿಹಾಲು ಕುಡಿದೆ. ಅವನಿಗೆ ಹಾಗೇ ಆಗಬೇಕು ಅಂತ. ಈಗ ಜಮೀನ್ದಾರಿ ಬಿಲ್ ಬಂತು. ನನಗೆ ಇನ್ನೂ ಖುಷಿ. ಅಸೆಂಬ್ಲಿಗೆ ಮೆಂಬರಾಗಿ ಎಲ್ಲಾದರೂ ಆ 'ಬಿಲ್'ನ ಹಿಂತಿರುಗಿಸು ತ್ತಾನೋ ಅಂತಿದ್ದೆ. ಈಗ ಅದೂ ತಪ್ಪಿಹೋಯ್ತು. ಚುನಾವಣೆಗೆ ಖರ್ಚು ಮಾಡಿದ್ದ, ಈಗ ಅದೂ ಇಲ್ಲ ನನಗೋ ಬಲುಖುಷಿ ಅಂದರೆ—"

ಅದಕ್ಕೇ ಇರಬೇಕು ಹುಳಿ ಬಲು ರುಚಿ!

"ನಿನ್ನ ಗುಟ್ಟು ಇಷ್ಟು ವರ್ಷವೂ ಗೊತ್ತಿತ್ತಿಲ್ಲವಲ್ಲೇ, ಶ್ಯಾಮರಾಯನ ಜತೆಗೆ ಅನ್ಯೋನ್ಯವಾಗಿದ್ದೆನಲ್ಲೇ!"

"ಇರಿ, ಅನ್ಯೋನ್ಯವಾಗಿ ನೀವಿದ್ದರೇನೇ ಅವನು ಅಧಃಪಾತಾಳಕ್ಕೆ ಇಳಿಯುವುದು ನನಗೆ ತಿಳಿಯೋದು."

"'ಏನು ಮನಸ್ಸೇ' ನಿಂದು ? ಮನಸ್ಸಿನ ತುಂಬಾ ಹುಳೀಗೆ ಇದ್ದಹಾಗೆ ಹುಳೀ ತುಂಬಿದೆಯಲ್ಲೇ! ಅದಕ್ಕೇ ಹುಳೀಗೆ ಹುಳಿ ಮುಂದು. ಅದೇ ನಂಗೆ ರುಚಿ ಅನ್ನು."

"ನಿಮ್ಮ ರುಚಿ ನಂಗೆ ಗೊತ್ತು ಅಂದರೆ! ಆ ಜೀವಣಾಂಶ ವಿಷಯ ಓದಿದಾಗಲೇ ಅನ್ನಿಸಿತು ನನಗೆ! ಮದುವೆಯಾದ ನನ್ನ ಅಕ್ಕನನ್ನ ನಿಮಗೆ ತೋರಿಸಿ, ನನ್ನ ತಂಗಿ ಜಾತಕ ನಿಮ್ಮಪ್ಪನಿಗೆ ಕೊಟ್ಟು, ನಿಮಗೆ ನನ್ನ ಕೊಟ್ಟು ಮದುವೆ ಮಾಡಿಸಿದ ಪರಮಾತ್ಮ ದಿಟವಾಗಲೂ ಬುದ್ಧಿವಂತಾ ಅಂತ."

"ಹೌದೇನೇ?"

"ಇಲ್ಲದೇ ಇದ್ದರೆ ನಿಮಗೆ ಈ ಸುಖ ದೊರೆಯುತ್ತಿತ್ತೇ ಅಂದ್ರೆ, ನಿಮ್ಮ ಮಾನ, ನನ್ನ ಮಾನ ಅದಕ್ಕಿಂದ ನಿಮ್ಮ ಅವಮಾನ ನನ್ನ ಅವಮಾನ ಅಂತ ನನಗೆ ತೋರುತ್ತಿತೇ?"

— ವಾಪಿ.

# ನಶೀಬಿನ ನಂಬರು

---

ನಮ್ಮಪ್ಪನನ್ನು ನಾವಿನ್ನು ಚುಚ್ಚುತ್ತಿದ್ದೇವೆ. ಅವನ ಸುತ್ತ ಬಿದ್ದ ಬಿದ್ದು ನಗುತ್ತಿದೇವೆ. ಪಾಪ. ಪೆಚ್ಚುಮೋರೆ ಹಾಕಿಕೊಂಡು, ತುಟಿ ಇಳಿಸಿ, ತಲೆಮೇಲೆ ಕೈ ಇರಿಸಿ, "ಬೇಡ್ರೊ! ಸುಮ್ಮನಿರ್ರೊ!!" ಎಂದು ಕಂಬನಿ ಸುರಿಸುತ್ತಾನೆ.

ಇನ್ನೇನೂ ಇಲ್ಲ, ಯಾವತ್ತೋ ಒಂದು ದಿನ, ಒಬ್ಬ ತಿರುಕ ಬಂದ ಮನೆಗೆ. ಭಸ್ಮೋದ್ಧೂಳಿತ ವಿಗ್ರಹ; ಕೈಯಲ್ಲೊಂದು ತ್ರಿಶೂಲ; ಕಿವಿಗಳಲ್ಲಿ ಲೋಲಕ್, ರುದ್ರಾಕ್ಷಿಯದು. ಬಾಯಲ್ಲಿ ಕಾಶಿ ರಾಮೇಶ್ವರ ವೈದ್ಯನಾಥ. ಸಾಲದ್ದಕ್ಕೆ ಅಂಗೈ ಮೇಲೆ ಅಂಗೈ ತಿಕ್ಕಿ ಗಂಗಾಜಲ ಬರಿಸುವ ಪವಾಡ... ಅಪ್ಪ ಬೆಪ್ಪು ಬೆರಗಾದ. ಪಕ್ಕದ ಮನೆಯಿಂದ ಒಂದು ರೂಪಾಯಿ ಸಾಲ ತರಿಸಿ ಅವನಿಗೆ ಕೊಟ್ಟ. ಅವನು, "ಇಕೊ! ಉಪಕಾರಕ್ಕೆ ತಕ್ಕ ಪ್ರತೀಕಾರ ನಾನೂ ಮಾಡುತ್ತೇನೆ. ಡಾರ್ಬಿ ಕುದುರೆ ಜೂಜಿನದು ೮೮೮೮ ಟಿಕೀಟ್ ತುಂಬ ನಶೀಬು" ಎಂದ, ಹೊರಟ.

ಸರಿ! ಅಪ್ಪ ಆ ಐದೆಂಟನೆಯ ನಂಬರಿಗಾಗಿ ಪೇಟೆ ಕೋಟಿ ಅಲೆದು ಸುಸ್ತಾದ; ಪತ್ತೆ ತರದೂದು ನಡೆಸಿದ ಬೆಂಗಳೂರು, ದಾವಣಗೇರಿ, ಹುಬ್ಬಳ್ಳಿ, ಬೆಳಗಾಂವಿ, ಪುಣೆ, ಬೊಂಬಾಯಿ, ಪ್ರಯಾಣ ೩೦೦ ರೂ. ಸಾಲ. ಬೊಂಬಾಯಲ್ಲೊಬ್ಬ ಏಜೆಂಟು ಗಂಟುಬಿದ್ದ, ಅವನು ಕೊಟ್ಟ ಹೇಳಿಕೆಯ ಮೇರೆಗೆ, ಅಪ್ಪ ಹೊಷಂಗಾಬಾದಿಗೂ ಹೋದ. ಅಲ್ಲಿ ಹೋಗಿ, ಅದನ್ನು ಕೊಂಡು ಕೊಂಡಿದ್ದವನನ್ನು ಭೇಟಿಯಾದ. ಆತನಿಗೂ ಗುಮಾನಿ ಇದರಲ್ಲೇನೋ ಗುಟ್ಟಿದೆ, ಐದೆಂಟು ಇರುವ ನಂಬರು. ಎಂಟುಸಾವಿರಕೊಟ್ಟರೇನೇ ಮಾರುವುದು, ಎಂದು ಹಟ ಹಿಡಿದ.

ಅಪ್ಪನಿಗೂ ಹಟ, ಅತಿಯಾಸೆ, ತಿರುಕನಮಾತು ಬೇರೆ ಕಿವಿಯುತ್ತಿತ್ತು. ಊರಿಗೆ ಬಂದು, ಮನೆ ಗದ್ದೆ ಎರಡನ್ನೂ ಮಾರಿ, ಹಣದ ಸಮೇತ ಹೋಷಂಗಾಬಾದಿಗೆ ಹೋಗಿ, ನಶೀಬಿನ ಟಿಕೀಟ್ ಸಹಿತ, ಬಾಡಿಗೆ ಮನೆಗೆ ಬಂದ. ನಂಬಿಕೆ ಅಂದರೆ, ಅದು.

ಡಾರ್ಬಿ ಸುದ್ದಿ ಪ್ರಕಾರ, ಜೂಜಿಗೆ ಮೂರು ತಿಂಗಳಿರುವಾಗಲೇ, ವಾತಾ ರೋಗದಿಂದ ಸತ್ತ ಕುದುರೆಯ ಸೂಚಕವೇ ಅಪ್ಪ ತಂದ ನಂಬರು!

ಆ ತಿರುಕನನ್ನು ಹಿಡಿದು, ಅವನ ಕೆನ್ನೆಗೆ ಎರಡೇಟು ಬಿಸಿಬಿಸಿಯಾಗಿ ಬಡಿದರೇನೆ ಅಪ್ಪನಿಗೆ ಸಮಾಧಾನ. ಕಡೆಗೆ ಅವನೂ ಸಿಕ್ಕಿಬಿದ್ದ, ಮಾರ್ಕೆಟ್ ಚೌಕದಲ್ಲಿ ಯಾರಕ್ಕೈಗೋ ಗಂಗೆ ಹಿಂಡುತ್ತಿದ್ದಾಗ, ಆಗ ಅಲ್ಲಿ ಅವನ ಕಪಾಳಕ್ಕೆ ಏಟು ಕೊಡುವುದು ಹೇಗೆ?

"ಹಾಳಾಯ್ತು ನಿನ್ನ ವೇಷ! ಧೂಳೆಬ್ಬಿಸದೆಯಲ್ಲೋ ನನ್ನ ಮನೇನ?" ಎಂದು ಉದ್ಗಾರ ತೆಗೆಯುವುದೊಂದೇ ಅಪ್ಪನ ಕೋಪಕ್ಕೆ ಶಾಂತಿಯ ದಾರಿ. "ನಶೀಬಿನ ನಂಬರು, ಎಂದು ನನಗೆ ಮೋಸಮಾಡಿದೆಯಲ್ಲೋ ನೀಚಾ" ಎಂದ.

ಆಗ, ಆ ತಿರುಕ ಅಂದನಂತೆ, "ನನ್ನ ಮಾತು ಸುಳ್ಳಾಯಿತೆ? ಹೊಷಂಗಾಬಾದಿನವನಿಗೆ ಎಂಟು ಸಾವಿರ ಕೊಡಿಸಲಿಲ್ಲವೆ, ಆ ನಂಬರು?"

—ರುಕ್ರಮ್ಮ.




ನಿಪುಣತನ ಅಲ್ಲಸಾರ್, ಯಾವಾಗಲೂ ಎಲ್ಲಾ ಕ್ಷೇತ್ರಗಳಲ್ಲಿಯೂ ಮುಂದಿರ ಬೇಕೆಂದು ನನ್ನ ಸಂಕಲ್ಪ.

# ಚೌರಮ ಗೀತೆ

ನಿನ್ನ ಮುಖ ಪಂಕಡಲಿ ನಳನಳಿಸಿ ಬೆಳೆದು ಕಣ್ಗೆಡ್ಡ—
ಮಾಗಿರ್ದ ಆ ಗಡ್ಡ, ನಿಷ್ಕರುಣ ಕ್ಷೌರಿಕನ ಕ್ಷುರಧಾರೆಯಲಿ
ಲಯವಾದುವೇ? ಹುಲುಸಾಗಿ ಬಿದಿರ ಮೆಳೆಯಂದದಲಿ
ಬೆಳೆದು, ಎನಿತೆನಿತೋ ನೋಟಕರ ನೇತ್ರಮದಕರಿಗೆ ತಾನಾ—
ಡೊಂಬೊಲವಾಗಿ ಕಳಕಳಿಸಿತ್ತು, ಇಂದು ತಾನದು ಬರಿಯ
ಬಯಲು ನಾಡಾಯ್ತಲಾ, ಅಚ್ಚರಿಯ ಸಿಡಿಲಂ ಬಡಿದು
ಗೆಳೆಯರೆಲ್ಲರಿಗೆ... ..............................

*  *  *

ನೆನೆದು ಕೊರಗಲೆ ನಿನ್ನ ಮುಖವಲ್ಮೀಕದಂದದಿ ಬೆಳೆದ
ಆ ನಲ್ಗಡ್ಡವಂ? ಕಾರಿರುಳ ಕಡೆದು ಪುಟವಿಟ್ಟಂತೆ ಮೆರೆದು
ತಾನಿಂದು ಮರೆಯಾದುದೇ; ಆ ಗಡ್ಡ ನಿನ್ನ ಮೊಗದ ಮೇಲಿದ್ದಾಗ
ಏನ್ ಸೊಗಸು! ಏನ್ ಚೆಲ್ವು! ಮೊಗದ ಕೊಳೆಯನು ಮುಚ್ಚಿ
ಕಳೆಗೊಟ್ಟವೋಲಿತ್ತು! ನಾಪಿತನ ಷಾಪಿನಲಿ ಕನ್ನಡಿಯ
ಮುಂದಾದರೂ ತಿಳಿಯದಾಯಿತೆ ನಿನಗೆ? ಕತ್ತರಿಸಿ ಬಿಸುಟಾ
ನಿಷ್ಕರುಣಿಗಾದರೂ ಬೇಯಲಿಲ್ಲವೆ ಕರುಳು? ಎಲ್ಲ ವಿಧಿ;
ನಿಷ್ಕರುಣಿ ವಿಧಿ ಹೂಡಿದಾಟವಿದ್ದೈಸೆ? ಆತೇನ ಮಾಡುವನು ?

*  *  *

ಯಾವ ಆವೇಶದಲ್ಲೊ, ಮತಿ ಶೂನ್ಯನಾಗಿ ನಲ್ಗಡ್ಡವಂ
ತೆಗೆಸಿ, ಈಗ ಕಣ್ಣೀರ್ ಬಿಡುವ, ಓ, ಎನ್ನ ನೇಹಿಗನೆ!
ಕೊರಗದಿರು, ಮರುಗದಿರು, ಪಶ್ಚಾತ್ತಾಪದಿಂ ಬೆಂದು.
ನಿನ್ನ ಗಡ್ಡಾವಸಾನದಲಿ ಜಗವೆಲ್ಲವೂ ಕೊರಗುವಂತಿಹುದು,
ಮಂಜು ಮಂಜಿನ ಮೊಗದ ಮ್ಲಾನ ದುಮ್ಮಾನದಲಿ!

ಆದರೇನ್? ಇಂದಳಿದುದೆಲ್ಲವೂ ಮುಂದೆ ಬೆಳೆವುದೆ ದಿಟಂ!
ಹಳೆ ಗಡ್ಡ ಹೋದರೇನಂತೆ? ಅದಕೆ ನೂರ್ಮಡಿಯಾಗಿ ಮತ್ತೆ
ಬೆಳೆವುದು ಕಣಾ, ಧೂಮಕೇತುವಿನಂತೆ, ಮೇಣ್, ಬೀದಿಯಂ
ಗುಡಿಸುವಾ ಮಹಾಕಸ ಪೊರಕೆಯಂದದಲಿ ಹೊದರು ಹೊದರಾಗಿ!

—ದಿಬ್ಬಯ್ಯ.

# ಮಹಾ ಮೂರಾಂಕ ನಾಟಕಂ

---

## ಪ್ರಥಮಾಂಕ

[ಮಾತೆ, ಸುತ ರಂಗದ ಮೇಲೆ ಬರುವರು.
ಮಾತೆಯು ಪುತ್ರನ ಕುರುಳನ್ನು ನೇವರಿಸುತ್ತಾ]

........ಮಗೂ.........ವಯಸ್ಸಾಯಿತು. ಏನೋಪ್ಪ ನಿನ್ನ ತಲೆ ಮೇಲೆ ನಾಲ್ಕು ಅಕ್ಕಿ ಕಾಳು ಬಿದ್ದುದನ್ನು ನೋಡಿ ಪ್ರಾಣ ಬಿಡಬೇಕು ಅಂತಿದ್ದೀನಿ. (ಸುಮ್ಮನಿದ್ದ ಸುತನನ್ನು ನೋಡಿ) ತಾಯಿಯ ಮಾತಾದರೂ ನಡೆಸಬೇಡ ವೇನೋ? ...... (ಅಲ್ಲಿಗೂ ಮಾತನಾಡದಿರುವ ಪುತ್ರನನ್ನು ಕಂಡು)ಏನೋ?.... ನಾವೆಲ್ಲಾ ಹೋದ ಮೇಲೆ ಮದುವೆ ಮಾಡಿಕೊಳ್ತೀಯೇನೋ? ಹೆತ್ತ ಮಗನೇ ಮಾತು ಕೇಳದ ಮೇಲೆ....ನಾನಿನ್ನು ಭಾವೀನೋ ಕೆರೇನೋ....(ನಿಧಾನವಾಗಿ ಹರಿಯುತ್ತಿದ್ದ ಕಣ್ಣೀರು ಉಕ್ಕೇರುವುದು)

**ಸುತ : ಹೂಂ!**

— ತೆರೆ —

ಇಂತು—ಈ—ನಾಟಕದೋಳ್ ಪ್ರಥಮಾಂಕಂ ಸಂಪೂರ್ಣಂ.

## ದ್ವಿತೀಯಾಂಕಂ

[ಮಾತೆ ಸುತ—ರಂಗಮಧ್ಯದಲ್ಲಿ—
ಕುವರನ ಬೆನ್ನನ್ನು ಸವರುತ್ತಾ....]

....ಅಪ್ಪಾ! ಒಪ್ಪಿದೆಯಾ? ... ಹುಡುಗಿ ಲಕ್ಷಣವಾಗಿದ್ದಾಳೆ. ಸ್ವಲ್ಪ ಕಪ್ಪಾದರೆ ತಾನೇ ಏನು?....ಕೋಗಿಲೆ ಕಪ್ಪಲ್ಲವೇ?....ಗುಣಾನೂ ಒಳ್ಳೆದಿದ್ದ ಹಾಗೆ ಕಾಣುತ್ತೆ ... ಓದಿದಾಳಂತೆ .. ಸಂಗೀತದಲ್ಲೂ ಪರವಾಗಿಲ್ಲ (ಇದನ್ನು ಕೇಳಿಯೂ ಉತ್ತರವೀಯದ ಅರ್ಭಕನನ್ನು ನೋಡಿ)....ಥೂ ಇದೇನು ಕಾಲ ಬಂತಪ್ಪಾ?

ತಂದೆತಾಯಿ ಮಾತು ಕೂಡ ಕೇಳೋಲ್ಲ. . (ಅಲ್ಲಿಗೂ ಪ್ರತ್ಯುತ್ತರ ಕೊಡದ ಪುತ್ರನನ್ನು ಈಕ್ಷಿಸಿ ತನ್ನ ಅಕ್ಷಿಗಳಲ್ಲಿ ಅಶ್ರುಬಿಂದುಗಳನ್ನು ಉದುರಿಸುತ್ತಾ) ಹಾಳು ಪರಮಾತ್ಮ ನಮ್ಮ ಹಣೇಲಿ ಮೊಮ್ಮಕ್ಕಳನ್ನು ನೋಡೋದು ಬರದೇ ಇಲ್ಲವೇನೋ? . (ಮಗನನ್ನು ನೂಕಿ) .. ನಿಮ್ಮ ತಂದೆ ಗೌರವ ಕಾಯುವುದಕ್ಕಾದರೂ ಒಪ್ಪಪ್ಪಾ....ನಿನ್ನ ಕಾಲಿಗೆ ಬೀಳ್ತೀನಿ....(ಅಶ್ರುಪ್ರವಾಹ ಧಾರಾಕಾರವಾಗಿ ಘುಮುಳಲು ಆರಂಭವಾಗುವುದು)

ಸುತ : ಹೂಂ ! !

— ತೆರೆ —

ಇಂತು—ಈ ನಾಟಕದೊಳ್ ದ್ವಿತೀಯಾಂಕಂ ಸಂಪೂರ್ಣಂ.

## ತೃತೀಯಾಂಕ

[ಮಾತೆ ಸುತ......]

ಮಾತೆ: (ಫಾಲವನ್ನು ಘಟ್ಟಿಸುತ್ತಾ) ಅಯ್ಯೋ ರಾಮಾ .. ಎಲ್ಲಿಂದ ತಂದ್ಯಪ್ಪಾ ಆ ತಾಟಕೀನಾ ! ...ಏನು ಹೆಣ್ಣಪ್ಪಾ ಕೆಲಸ ಬರೋಲ್ಲ, ಕಾರ್ಯ ಗೊತ್ತಿಲ್ಲ, ಸಂಗೀತ ಬಿಟ್ಟರೆ ಬೇರೇನೂ ಇಲ್ಲ.....(ಎದುರು ಮಾತಾಡದೆ ಕಣ್ಣು ಕಣ್ಣು ಬಿಡುತ್ತಿರುವ ಮಗನನ್ನು ನೋಡಿ ಜೀವನ ಮೂರ್ತಿ ತಿವಿದು) ಕೈ ಹಿಡಿದ ಹೆಂಡ್ತೀನ ಕೈಲಿಟ್ಕೊಳ್ಳೋಕೆ ಕೈಲಾಗದ ನೀನೆಂಥಾ ಗಂಡಸೋ?... (ಅಲ್ಲಿಗೂ ಸುಮ್ಮನಿರುವುದನ್ನು ಕಂಡು ಉಕ್ಕಿ ಬರುತ್ತಿರುವ ಕಣ್ಣೀರನ್ನು ಒರೆಸುತ್ತಾ)

ಈ ಮನೇಲಿ ಈ ಲಂಖಿಣಿ ಹೀಗೆ ಕುಣಿಯೋದನ್ನ ಹೇಗೆ ನೋಡಲಿ ರಾಮಾ! ದೇವರೇ ನನ್ನ ಜೀವನ ಸಾಕು ಮಾಡಪ್ಪಾ! (ತಲೆಯ ಮೇಲೆ ಕೈ ಇಟ್ಟುಕೊಂಡು ಸರಕ್ಕನೆ ನೆಲದ ಮೇಲೆ ಕೂರುವಳು)

ಸುತ : ಅಮ್ಮಾ ! ! !

— ತೆರೆ —

ಇಂತು—ಈ ಮಹಾ ಮೂರಂಕ ನಾಟಕಂ ಸಂಪೂರ್ಣಂ.

—ಅ.ಸು.ರಾ.

——o——

# ನಾನು ಗಂಡು ನೋಡಿದ್ದು

ನಮ್ಮ ಮನೆಗೆ ಅವರು ಬರುವುದಿಲ್ಲ. ನಾವೇ ಅವರ ಮನೆಗೆ ಹೋಗಬೇಕು, ಎಂದು ಒತ್ತಾಯಮಾಡಿದಾಗಲೇ, ಧೂರ್ತ, ಎಂದು ನಾನು ನಿಶ್ಚಯಿಸಿದೆ. ಆದರೂ, ಅಪ್ಪ ಅಮ್ಮನ ನಿರ್ಬಂಧಕ್ಕೆ ಸಿಂಗಾರ ಭಂಗಾರ ಮಾಡಿಕೊಂಡು, ಅವರ ಜೊತೆ ನಾನೂ ಹೋದೆ.

ಜೈಲಿನಹಾಗಿತ್ತು ಬೈಲಿನಲ್ಲಿ ಅವರ ಮನೆ. ದೊಡ್ಡ ದೊಡ್ಡ ಮರಗಳಿದ್ದವು, ಕಾಂಪೌಂಡ್‌ತುಂಬ—ನೇಣುಹಾಕಿಕೊಳ್ಳುವುದಕ್ಕೆ ತುಂಬಾ ಅನುಕೂಲ. ತೋಟಕ್ಕೆ ನೀರು ಸೇದುವುದಕ್ಕೆ ಒಂದು ಭಾವಿ ಬೇರೆ—ಹಗ್ಗ ಸಿಗದಿದ್ದರೆ, ಅದರೊಳಕ್ಕೆ ಹಾರಬಹುದೆನಿಸಿತು.

ಮೂರು ಹುಡುಗರು—ಒಂಬತ್ತು, ಏಳು, ಐದು—ಮನೆಯ ಮುಂದೆ, ಚಕ್ಕೋತಕಾಯಿ ಚೆಂಡನ್ನು ಎಸೆದು ಕ್ರಿಕೆಟ್ ಆಡುತ್ತಿದ್ದರು, ಗೋಡೆಗೆ ಗೀಟ್ ಎಳೆದು. ಜಿಪುಣಾಗ್ರೇಸರ, ತನ್ನ ಮಕ್ಕಳಿಗೆ ಚೆಂಡನ್ನೂ ಕೊಂಡುಕೊಡ. ಉಳಿದ ಎರಡು ಮಕ್ಕಳಲ್ಲಿ ಒಂದು ಹೊಸಲಲ್ಲಿ ಕುಳಿತಿತ್ತು; ಒಂದು ತೊಟ್ಟಿಲಲ್ಲಿ ಸಂಗೀತ ಅಭ್ಯಾಸಮಾಡುತ್ತಿತ್ತು, ನೀಲಾಂಬರಿ ರಾಗ, ಈ ವಾನರ ಸೇನೆಗೆ ನಾನೇ ಪೋಷಕಿ?

ಮನೆಯೊಳಕ್ಕೆ ಹೋದೆವು. ಅವಳು ಬಾಳಿ ಬೆಳಗಿದ ಮನೆ. ಅವಳು ನೊಂದು ನೀಗಿದ ಮನೆ. ಅವಳು ಹೊತ್ತು ಹೆತ್ತ ಮನೆ. ಅವಳೇ ಬಾಗಿಲಲ್ಲಿ ನಿಂತು, ನನ್ನನ್ನು ಹಿಡಿದು ಹೊರಕ್ಕೆ ನೂಕಿದಹಾಗಾಯಿತು, ನನಗೆ.

ಬಲೆಯ ನಟ್ಟನಡುವೆ, ಜೇಡ ಕುಳಿತಿದ್ದಹಾಗೆ, ಹಾಲ್‌ನ ಮಧ್ಯದಲ್ಲಿ, ಇಲೆಕ್ಟ್ರಿಕ್ ಪಂಚ ದೀಪದ ಕೆಳಗಿನ ಸೋಫಾ ಮೇಲೆ, ಕುಳಿತಿದ್ದರು. ವಿಧುರ ಮಹಾಶಯರು, ಕನ್ಯಾರ್ಥಿ! ಬಟ್ಟತಲೆ, ಸಿಲ್ಕ್‌ಷರ್ಟ್, ಬಾಯಿ ತುಂಬ ತಂಬುಲ (ಅವಳು ಸತ್ತು ಇನ್ನೂ ತಿಂಗಳಾಗಿಲ್ಲ....ಬಾಣಂತಿ ಕ್ಷಯ) ಚಿನ್ನದ ಗುಂಡಿ, ಬೆರಳುಂಗುರ, ದೇಶಾವರದ ನಗೆ, ಏಳೆಂಟು ಕೃತಕ ದಂತ....

ಇಂಗ್ಲಿಷಿನಲ್ಲೇ ಮಾತು, ಇಂಗ್ಲಿಷ್ ಬರದಿದ್ದರು; ಕರ್ಕಶವಾದ ಶಾರೀರ! ಎರಡು ಸಾವಿರ ರೂಪಾಯಿ ಒಡವೆ ಇಡುತ್ತಾರಂತೆ, ನನಗೆ! ಹೆಣ್ಣು ಅಂದರೆ, ಬೆಲೆವೆಣ್ಣು ಎಂದು ತಿಳಿದನೋ ಏನೋ? ಮಂಕ. ಇವನ ಒಡವೆ ಹೊತ್ತು ಗುಲಾಮತನಕ್ಕಿಳಿಯುವ ಪಾಪಿ ನನ್ನ ಅಕ್ಕ ತಂಗಿಯರಲ್ಲಿ ಯಾರೋ, ಗೊತ್ತಿಲ್ಲ.

ಅವರಿಗೆ ಬೇಕಾದ್ದದ್ದು, ಆ ಶಿಶುವಿಹಾರವನ್ನು ನಡೆಸಲು ಒಬ್ಬಳು ದಾದಿ, ಆ ಬಂಗಲೆ ಕಾಯುವುದಕ್ಕೆ ಒಂದು ಪಿಶಾಚಿ, ಅವರ ಹೊರ ವಿಹಾರಗಳನ್ನು ಸಮಾಜದೆದುರು ಮುಚ್ಚಿ ಅವರ ಮಾನ ಉಳಿಸಿ ಅವರಿಗೆ ಸಭ್ಯ ಗೃಹಸ್ಥ ಪಟ್ಟ ಕಟ್ಟಲು ಒಬ್ಬಳು 'ಹೆಂಡತಿ', ಅವರ ಒಡವೆ ಹೊತ್ತು. ಅವರ ಶ್ರೀಮಂತಿಕೆಯನ್ನು ನೆಂಟರಿಷ್ಟರ ಮುಂದೆ ಜಾಹಿರಾತು ಮಾಡಲು ಒಂದು "ಆಕೆ."

ಅಲ್ಲೇ ಗೋಡೆಯಮೇಲೆ ಹಿಂದಿನ ಹೆಂಡತಿಯ ಚಿತ್ರವನ್ನೇರಿಸಿ, ಬಿಗಿಯಾಗಿ ಮೊಳೆ ಹೊಡೆದಿದ್ದ. ನನ್ನನ್ನೂ ಅವನು ಹಾಗೆ ಮಾಡದೆ ಬಿಟ್ಟಾನೆಯೆ? ನಾನು ಸತ್ತ ಹತ್ತು ದಿನದಲ್ಲೇ ಹೀಗೆಯೇ ಇನ್ನೊಂದು ಯಜ್ಞಪಶುವನ್ನು ಮನೆಯೊಳಕ್ಕೆ ತರಿಸದೆ ಇರುತ್ತಾನೆಯೆ?

ತಲೆ ಗಿರ್ರನೆ ತಿರುಗಿತು. ಸರಸರನೆ ಹೋಗಿ, ನಾನು ಗಾಡಿಯೊಳಕ್ಕೆ ಕೂತುಬಿಟ್ಟೆ. ಐದು ನಿಮಿಷದನಂತರ, ಅಪ್ಪ ಅಮ್ಮ ಇಬ್ಬರೂ ಬಂದರು. "ಯಾಕೆ? ವೇಣಿ" ಎಂದು ಅಪ್ಪ ಗದರಿಸಿದರು. "ಸುಮ್ಮನಿರಿ, ಸಾಕು! ನನಗೆಲ್ಲ ಅರ್ಥವಾಯಿತು" ಎಂದು ಅಮ್ಮ ನನ್ನ ಪಕ್ಷವಹಿಸಿದಳು.

—ನಾಗವೇಣಿ.



# ಭಾರತೀ ಸ್ವಯಂವರ

( ಸ್ವಾರಸ್ಯಗಳು )

ಕುಂಟರೊಬ್ಬರು ಉಮೇದುವಾರರಾಗಿ ನಿಂತಿದ್ದರಂತೆ, ಬಿದ್ದುಹೋದ ಮತ್ತೆ ನಿಲ್ಲುತ್ತಾರಂತೆ. ಕರಡಿಗಳೇ ಶಿವಪೂಜೆ ಮಾಡೋಣ ಅಂತ ಹೊರಟು ವಂತೆ. ಗಂಡ ಹೆಂಡತಿ ಇಬ್ಬರೂ ಒಬ್ಬನೇ ಉಮೇದುವಾರನಿಗೆ ವೋಟು ಕೊಡಲು ನಿಶ್ಚಯಿಸಿದರಂತೆ. ತಾನು ಒಲಿದಿದ್ದ ಪ್ರತಿನಿಧಿಗೆ ವೋಟುಕೊಟ್ಟು, ಮಿಕ್ಕೆಲ್ಲರ ಪೆಟ್ಟಿಗೆಯೊಳಕ್ಕೂ ಒಬ್ಬ ಕುಂಕುಮ ಚೆಲ್ಲಿದ. ನಿಧಿಗೆ ತಕ್ಕ ಪ್ರತಿನಿಧಿ, ಎಂದು ಒಬ್ಬ ನಿಶ್ಚಯಿಸಿದ.. ಗೆದ್ದು ಮಾನ ಕಳೆದುಕೊಳ್ಳುವುದಕ್ಕಿಂತ ಸೋತು ಠೇವಣಿ ಕಳೆದುಕೊಳ್ಳುವುದು ಉತ್ತಮ, ಎಂದ ಒಬ್ಬ....ಸ್ವತಂತ್ರ ಭಾರತದಲ್ಲಿ ಸ್ವತಂತ್ರ ಉಮೇದುವಾರನಿಗೆ ಸ್ಥಾನವೇ ಇಲ್ಲ, ಎಂದು ಮಂತ್ರಿಗಳೊಬ್ಬರು ಹೇಳಿದರು... ನಮ್ಮ ಚುನಾವಣೆ ಬಹಳ ಶಾಂತ ವಾತಾವರಣದಿಂದ ನಡೆಯಿತು ಎಂದು ಇಂಡೋನೇಷ್ಯಾ ನಿಯೋಗದವರು ಹೇಳಿಕೆ ಇತ್ತರು... ಒಂದೆರಡು ಬೂತುಗಳಲ್ಲಿ ಕ್ಲುಪ್ತಕಾಲಕ್ಕೆ ಸರಿಯಾಗಿಯೇ ಮತದಾನ ಪ್ರಾರಂಭವಾಯಿತು. ಅಸಾಮಿನಲ್ಲಿ ಒಂದು ಬೂತಿನ ಸುತ್ತ ನೂರು ಗಜ ಬಿಡುವಾಗಿ ಇದ್ದೇ ಇದ್ದುವು. ಯಾವ ಜಾತಿಯಾದರೇನು ಉಮೇದುವಾರ, ನಮ್ಮ ಜಾತಿಯವನಾದರೆ ತೀರಿತು, ಎಂದು ಒಬ್ಬರು ಘೋಷಿಸಿದರು....ತಮಗೆ ನಿಲ್ಲಲು ಧೈರ್ಯವಿಲ್ಲದೆ, ಒಬ್ಬರು ತನ್ನ ಹೆಂಡತಿಯನ್ನೇ ಚುನಾವಣೆಗೆ ನಿಲ್ಲಿಸಿದ್ದರು .. ವೋಟು ಕೊಟ್ಟು ಸತ್ತವರು ಹಲವರಾದರೆ, ಸತ್ತು ವೋಟು ಕೊಟ್ಟವರು ಇನ್ನೂ ಅಧಿಕ. ಹೆಂಡಕ್ಕಾಗಿಯೇ ಅನೇಕರು ವೋಟನ್ನು ಪೋಲುಮಾಡಿದರು ಹೊಟ್ಟೆಮೇಲೆ ಒದ್ದೆ ಬಟ್ಟೆ ಕಟ್ಟಿಕೊಂಡು, ಕಣ್ಣಿಗೆ ಕೆಂಪು ಬಟ್ಟೆ ಕಟ್ಟಿಕೊಂಡು. ಕೈಗೆ ಕಂಕಣ ಕಟ್ಟಿಕೊಂಡು, ಅನೇಕರು ವೋಟು ಮಾಡಿದರು-- ಸ್ವತಂತ್ರವಾಗಿ ನಿಂತದ್ದೂ ಒಂದು ಬಗೆಯ ತಂತ್ರವಂತೆ. ಇದುವರೆಗೂ ತಾವು ಮಾಡಿದ ಮಹತ್ಸೇವೆಗಿಂತ ನೂರುಪಾಲು ಮುಂದೆ ಮಾಡುತ್ತೇವೆ, ಎಂದು ಗೆದ್ದವರೊಬ್ಬರು ಎದೆ ತಟ್ಟಿದರು....ತಿರುವಾಂಕೂರು— ಕೊಚ್ಚಿನ್‌ನಲ್ಲಿ, ಚುನಾವಣೆ ಫಲಿತಾಂಶ ಹೊರಬಿದ್ದಮೇಲೂ, ಸೂರ್ಯ ಉದಿಸುತ್ತಿದ್ದಾನಂತೆ; ಎಣಿಕೆ ದಿವಸ, ಒಬ್ಬರು ತರಿಸಿದ ಬ್ಯಾಂಡನ್ನು ಇನ್ನೊಬ್ಬರು ಬಾರಿಸಿದರಂತೆ....ದಕ್ಷಿಣ ಇಂಡ್ಯಾ ರಾಜ್ಯಗಳಲ್ಲಿನ ಫಲಿತಾಂಶಗಳನ್ನು ಓದಿದ ಮೇಲೆ, ತಾನು ಉಮೇದುವಾರನಾಗಿ ನಿಲ್ಲಬಾರದು ಎಂದು ಟ್ರೂಮನ್ ಸಾಹೇಬರು ನಿಶ್ಚಯಿಸಿರುವಂತೆ; ಇತ್ಯಾದಿ ಇತ್ಯಾದಿ........

—o—




# ವೈಟೋಫೆರಿನ್

## (ಆಧುನಿಕ ಶಕ್ತಿವರ್ಧಕ ಟಾನಿಕ್)

★ ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್‌ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತ ಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಖಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹ ದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ. ★

★ ★

ತಯಾರಕರು :

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ, ಲಿಮಿಟೆಡ್**

**ಮಲ್ಲೇಶ್ವರಂ - - - ಬೆಂಗಳೂರು 3.**





# ಕೊರವಂಜಿ

**ಬಳೇಪೇಟೆ : : ಬೆಂಗಳೂರು 2**

—o—

**ಬಿಡಿ ಪ್ರತಿ ಕೇವಲ ನಾಲ್ಕಾಣೆ**

**ವಾರ್ಷಿಕ ಚಂದಾ: ಕೇವಲ 3 ರೂ.ಗಳು (ಅಂಚೆ ವೆಚ್ಚ ಸಹಿತ)**


**ನಮ್ಮ ಹೊಸ ಮಾರಾಟಗಾರರು:**

Sri. S BHAGAVANTH SHANBHOGHA,
Sri Anjaneya Store,
Saligrama. S. (Kanara)

M/s. D. GANAPATHI RANADE,
Lakkavalli.

M/s. M. R. KESHAVASETTY & BROS.,
Davangere.

ಬಹು ಬೇಗನೇ ಬರಲಿದೆ

ಬೆಂಗಳೂರು ಸಿಟಿ ★ ಬೆಂಗಳೂರು ದಂಡು

ಶಾರದಾ ರೂಪಮಹಲ್

ಟಾಕೀಸುಗಳಲ್ಲಿ

ಹೆಣ್ಣಿನ ಕಣ್ಣೀರಿನ ಒಂದೊಂದು ಬಿಂದುವೂ



ತಾಯ ಹೃದಯದಲ್ಲಿ ಒಂದು ಸಾಗರದಂತೆ

# —ತಾಯ್ ಉಳ್ಳಂ—

—(ತಮಿಳು)—

ಡೈರೆಕ್ಟರ್ : ರಾಮನಾಥ್

ಸ್ಟುಡಿಯೊ : ವಾಹಿನಿ

ನಾರಾಯಣನ್ ಕಂಪೆನಿ ತಯಾರಿಕೆ

# 26-1-1952 ರಿಂದ ಪ್ರದರ್ಶಿಸಲ್ಪಡುತ್ತಲಿದೆ



ಶೋಭನಾಚಲರವರ

# ಸಾವಾಸಂ

(ತೆಲುಗು)

ಕೃಷ್ಣವೇಣಿ—ಪ್ರಭಾಕರರಾವ್—ಕನಕಂ

## ಬೆಂಗಳೂರು—ವಿಜಯಾ ★ ಮಿನರ್ವಾ

ಮೈಸೂರು — ಅಪೇರಾ    ದಾವಣಗೆರೆ—ವಸಂತಾ

ಚಿತ್ರಮಂದಿರಗಳಲ್ಲಿ

ಶಿವರಾತ್ರಿ ಬಿಡುಗಡೆ

ಶೋಭನಾಚಲರವರ ಮನ್ನೈವಿ (ತಮಿಳು)

Y. F C. RELEASE

Koravanji, February 1952



ನವಯೌನ
ಉಜ್ವಲ ಜೀವನಕ್ಕೆ
ವಿಶ್ವಾಸನೀಯವಾದ ಮಾರ್ಗ
ಪಂಡಿತ.ಡಿ ಗೋಪಾಲಾಚಾರ್ಲುರವರ
ಜೀವಾಮೃತಂ
ಬಿಗುವಾದ ಮಾಂಸ ಖಂಡಗಳಿಂದ
ಪ್ರವಿಮಲವಾದ ಉಷ್ಣ ರಕ್ತದಿಂದ
ತೇಜೋವಂತವಾದ ವರ್ಚಸ್ಸಿನಿಂದ
ನಾದೋತ್ಪತ್ತಿಯ ನರಗಳಿಂದ
ಸುಖಮಯ ಜೀವನವನ್ನು
ಪ್ರಸಾದಿಸುವುದು,
ಜೀವಾಮೃತಂ
ಆಯುರ್ವೇದಾಶ್ರಮಂ ಲಿಮಿಟೆಡ್
ಮದರಾಸು ೧೨

ಫೆಬ್ರುವರಿ 1 ರಿಂದ ಅಮೋಘ ಪ್ರಾರಂಭ



ಮಾಡರನ್ ಥಿಯೇಟರ್ಸ್‌ರವರ

# ಆಡಜನ್ಮ

(ತೆಲುಗು)

ನಾರಾಯಣರಾವ್, ಬಿ. ಎಸ್. ಸರೋಜ, ಗಿರಿಜ,
ಲಿಂಗಮೂರ್ತಿ

ಬೆಂಗಳೂರು **ಸಾಗರ್**

ಮತ್ತು ಇತರ ಪ್ರಮುಖ ಕೇಂದ್ರಗಳಲ್ಲಿ ಏಕಕಾಲದಲ್ಲಿ ಪ್ರದರ್ಶನಾರಂಭ

**A TALLAM RELEASE**

Printed by B. S. Iyengar, Bangalore City
Publisher—B N. Gupta    Editor—M Sivaram